# ಆಭರಣಗಳು ಮತ್ತು ಭಾಷೆ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)



ನೋಂದಣಿ ಸಂಖ್ಯೆ: ೧೬೦೧೦೨೦೩೦೦೦೨

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೬-೧೭

# ಆಭರಣಗಳು ಮತ್ತು ಭಾಷೆ

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಪ್ರಬಂಧ)



ನೋಂದಣಿ ಸಂಖ್ಯೆ : ೧೬೦೧೦೨೦೩೦೦೦೨

ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೭

# ಪರಿವಿಡಿ

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವಿಧಾನ

### ಪ್ರಸ್ತಾವನೆ

ಪ್ರಾಚೀನ ಮಾನವರ ಬೌದ್ಧಿಕ ಶಕ್ತಿ ಬೆಳೆದಂತೆ ತನಗೆ ಅವಶ್ಯವಿರುವ ಮೂಲಭೂತ ವಸ್ತುಗಳನ್ನು ಪೂರೈಸಿಕೊಳ್ಳುವ ಸಾಮರ್ಥ್ಯ ಗಳಿಸಿಕೊಂಡನು. ಪ್ರಕೃತಿಯಲ್ಲಿನ ವಸ್ತುಗಳನ್ನು ಬಳಸಿಕೊಂಡು ಸಾಧ್ಯವಾದಷ್ಟು ರಕ್ಷಣಾತ್ಮಕವಾಗಿ ಜೀವಿಸಲು ಪ್ರಾರಂಭಿಸಿದನು. ನಂತರದಲ್ಲಿ ಕೃತಕ ನಿರ್ಮಾಣಗಳ ಮೂಲಕ ತನ್ನ ರಕ್ಷಣೆಯನ್ನು ಮಾಡಿಕೊಂಡನು.

ಮಾನವರು ಹೆಚ್ಚಾಗಿ ಕಾಡಿನಲ್ಲಿಯೇ ವಾಸವಾಗಿದ್ದರು. ಅಲ್ಲಿರುವ ಎಲೆ, ಹೂವು, ಬಳ್ಳಿಗಳಿಂದ ಶೃಂಗರಿಸಿಕೊಳ್ಳತೊಡಗಿದರು. ಅಲ್ಲಿರುವ ಹಲವಾರು ವರ್ಣ ಚಲುವಿಗೆ ಮಾರು ಹೋದರು. ಹೀಗೆ ಮನಸ್ಸಿನಲ್ಲಿ ಮೊದಲು ದೇಹ ಶೃಂಗಾರದ ಕಲ್ಪನೆ ಬಂದಿತು. ಇವುಗಳಿಂದಲೇ ತಮಗೆ ಬೇಕಾದ ಆಭರಣಗಳನ್ನು ತಯಾರಿಸಿಕೊಳ್ಳಲು ಮುಂದಾದರು.

ಮೊದಲು ಹಚ್ಚೆ ಹಾಕಿಕೊಳ್ಳುವ ಪದ್ಧತಿ ಇತ್ತು. ಕಾಲ ಕ್ರಮೇಣ ಇದು ಮರೆಯಾಗಲಾರಂಭಿಸಿತು. ಇದು ಮಾಯವಾಗಿ ಸೌಂದರ್ಯ ಪ್ರಜ್ಞೆ ಪರಿಜ್ಞಾನ ಹೆಚ್ಚಳವಾಗಲಾರಂಭಿಸಿತು. ಅದೇ ಈಗ ಆಭರಣ ರೂಪ ಪಡೆಯಿತೆಂದು ಹೇಳಬಹುದು.

ಇತಿಹಾಸ ಅಧ್ಯಯನದಲ್ಲಿ ಮನುಷ್ಯನಿಗೆ ಬಟ್ಟೆಯ ಕಲ್ಪನೆಗೆ ಮುಂಚೆ ಆಭರಣಗಳ ಕಲ್ಪನೆ ಇರುವುದನ್ನು ನೋಡಬಹುದು. ಹರಪ್ಪಾ ಮೆಹೆಂಜೋದಾರೋದಲ್ಲಿ ದೊರೆತ ಅವಶೇಷಗಳಿಂದ ಅಲ್ಲಿರುವ ಜನರು ಆಭರಣ ಹಾಕಿಕೊಳ್ಳುತ್ತಿದ್ದರೆಂಬುದನ್ನು ಚರಿತ್ರಾಕಾರರ ಅಧ್ಯಯನಗಳಿಂದ ತಿಳಿದುಬರುತ್ತದೆ.

ಇತಿಹಾಸದ ಪೂರ್ವದಲ್ಲಿ ಹಕ್ಕಿಗಳ ಮೂಳೆ ಹಾಗೂ ಪ್ರಾಣಿಗಳ ಹಲ್ಲುಗಳಿಂದ ಮಾಡಿದ ವಿವಿಧ ಆಭರಣಗಳು ಇದ್ದವು ಎಂದು ತಿಳಿಯಬಹುದು. ಮಾನವನ ದೇಹದಲ್ಲಿನ ಅಂಗಾಂಗಗಳು

ಮೂಲಭೂತ ಕಾರ್ಯಗಳು ಜೀವನಾವಶ್ಯಕತೆ ಪೂರೈಸಿಕೊಳ್ಳುವುದಕ್ಕೆ ಸಹಾಯಕವಾಗಿರದೆ ಭಾಷೆಯನ್ನು ಸೃಷ್ಟಿಸಿಕೊಂಡದ್ದು ಮಾನವನ ಮಹತ್ವವಾದ ಅನ್ವೇಷಣೆಯಾಗಿದೆ. ಭಾಷೆಯನ್ನು ಸೃಷ್ಟಿಸಿಕೊಂಡಿರುವ ಮಾನವ ಮತ್ತು ಪ್ರಾಣಿ ಪ್ರತ್ಯೇಕಗೊಳ್ಳಲು ಒಂದು ಸಾಧನೆಯಾಗಿದೆ. ಭಾಷೆಯನ್ನು ವ್ಯವಹಾರಕ್ಕೆ ಮಾತ್ರ ಬಳಸದೆ ತಾನು ಬಳಸುವ, ತನ್ನ ಸುತ್ತಮುತ್ತಲಿನ ಎಲ್ಲಾ ವಸ್ತುಗಳನ್ನು, ಆಭರಣಗಳನ್ನು, ವ್ಯಕ್ತಿಗಳನ್ನು, ಪ್ರಾಣಿಗಳನ್ನು ಪ್ರತ್ಯೇಕವಾಗಿ ಗುರುತಿಸಲು ಸಹಕಾರಿಯಾಗಿದೆ. ಈ ರೀತಿ ಪ್ರತ್ಯೇಕವಾಗಿ ಗುರುತಿಸಲು ಬಳಸಿಕೊಂಡ ಸಂಕೇತವನ್ನು 'ಹೆಸರು' ಎಂದು ಕರೆಯಬಹುದು.

ಪ್ರಾಚೀನ ಕಾಲದಲ್ಲಿ ಆಭರಣಗಳನ್ನು ಕೇವಲ ಶೃಂಗಾರಕ್ಕಾಗಿ ಧರಿಸದೆ ಕೆಲವು ಸಂಪ್ರದಾಯ ಆಚರಣೆ ರೂಢಿ-ನಂಬಿಕೆಗಳ ಹಿನ್ನೆಲೆಯಲ್ಲಿ ಧರಿಸುತ್ತಿರುವುದು ಕಂಡುಬರುತ್ತದೆ. ಪ್ರಾಚೀನ ಕಾಲದಿಂದಲೂ ಇಂದಿನವರೆಗೆ ಪ್ರತಿಯೊಬ್ಬರೂ ಆಭರಣಗಳನ್ನು ಧರಿಸುವುದು ಕಂಡುಬರುತ್ತದೆ. ಅವುಗಳ ಪ್ರದೇಶದಿಂದ-ಪ್ರದೇಶಕ್ಕೆ, ಸಮುದಾಯದಿಂದ-ಸಮುದಾಯಕ್ಕೆ, ವ್ಯಕ್ತಿಗಳಿಂದ-ವ್ಯಕ್ತಿಗಳಿಗೆ, ಧರ್ಮ, ಜಾತಿಗಳಿಗನುಗುಣವಾಗಿ ಭಿನ್ನತೆಯಿಂದ ಕೂಡಿರುವುದು ಕಂಡುಬರುತ್ತದೆ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ಆಭರಣಗಳು ಕುರಿತು ನಂಬಿಕೆ, ಸಂಪ್ರದಾಯ ಮೊದಲಾದವುಗಳನ್ನು ಕುರಿತು ಈ ಅಧ್ಯಯನದಲ್ಲಿ ವಿವರಿಸಲಾಗುವುದು.

ಆಭರಣಗಳು ವೈವಿಧ್ಯತೆಯಿಂದ ಕೂಡಿದೆ. ತನ್ನ ಕಣ್ಮುಂದೆ ಇರುವ ಮರೆಯಾಗಿರುವ ವಸ್ತು, ವ್ಯಕ್ತಿ ಹಾಗೂ ಆಭರಣಗಳನ್ನು ಗುರುತಿಸಿಕೊಳ್ಳಲು ಅಥವಾ ಮನುಷ್ಯನಲ್ಲಿ ಕಲ್ಪನೆಗೊಳ್ಳಲು ಹೆಸರು ನೀಡುವಿಕೆಯು ಪ್ರಯೋಜನಕಾರಿಯಾಯಿತು.

ಆಭರಣಗಳು ಇದು ಕಾಲಕ್ಕೆ ತಕ್ಕಂತೆ ಪ್ರದೇಶದಿಂದ-ಪ್ರದೇಶಕ್ಕೆ ಬದಲಾವಣೆಯಾಗಿರುವುದನ್ನು ನೋಡಬಹುದು. ಕಾಲ ಗತಿಸಿದಂತೆ ಹಳೆಯ ಪದ್ಧತಿ ಮಾಯವಾಗಿ ಹೊಸ ಮಾದರಿಯ ಪದ್ಧತಿಯು ಮುಂದುವರೆಯುವುದನ್ನು ನೋಡಬಹುದಾಗಿದೆ.

ಆಭರಣಗಳ ಇತಿಹಾಸ ತಿಳಿಯುವುದು ಪ್ರಮುಖವಾಗಿದೆ. ಏಕೆಂದರೆ ಅಧ್ಯಯನ ಮಾಡುವ ಮೊದಲು ಇತಿಹಾಸ ತಿಳಿಯುವುದು ಅದರ ಕಲ್ಪನೆ ತಿಳಿಯುವುದು ಬಹಳ ಮುಖ್ಯ. ಹಾಗೇ ಆಭರಣಗಳ ವರ್ಗೀಕರಣವು ತಿಳಿಯಬಹುದಾಗಿದೆ.

ಆಭರಣಗಳ ಬಳಕೆಯ ಸ್ಥಿತ್ಯಂತರಗಳ ಕುರಿತಾದ ಗಾದೆ, ಒಗಟು, ಒಡಪುಗಳನ್ನು ಇಲ್ಲಿ ಚರ್ಚಿಸಲಾಗಿದೆ. ಪ್ರದೇಶದಿಂದ ಪ್ರದೇಶಕ್ಕೆ ಧರ್ಮ, ಜಾತಿ, ಸಂಪ್ರದಾಯ, ಪದ್ಧತಿ, ಆಚಾರ, ವಿಚಾರಗಳಿಗನುಗುಣವಾಗಿ ಆಭರಣಗಳ ಹೆಸರು ಬದಲಾವಣೆಯಾಗಿರುವುದು ಹಾಗೂ ರೂಪಾಂತರಗೊಂಡಿರುವುದನ್ನು ಇಲ್ಲಿ ಚರ್ಚೆಗೊಳಪಡಿಸಲಾಗುವುದು.

**ಅಧ್ಯಯನದ ಉದ್ದೇಶ**

೧. ಪ್ರಸ್ತುತತೆ ಅಧ್ಯಯನದಲ್ಲಿ ಆಭರಣಗಳ ಕುರಿತಾದ ಸಮುದಾಯದ ನಂಬಿಕೆ, ಆಚರಣೆ ಮತ್ತು ನಿಷೇಧಗಳನ್ನು ಕುರಿತು ವಿವರಿಸಲಾಗುವುದು.

೨. ಆಭರಣಗಳಿಗೆ ಸಂಬಂಧಿಸಿದ ಗಾದೆ, ಒಗಟು ಹಾಗೂ ಒಡಪುಗಳನ್ನು ಕುರಿತು ಭಾಷಿಕವಾಗಿ ವಿವರಿಸಲಾಗುವುದು.

೩. ಆಭರಣಗಳ ಹೆಸರುಗಳ ಮೂಲ ಭಾಷಾರೂಪಗಳನ್ನು ಗುರುತಿಸಲಾಗುವುದು.

೪. ಆಭರಣಗಳ ವರ್ಗೀಕರಣವನ್ನು ಕುರಿತು ವಿವರಿಸಲಾಗುವುದು.

೫. ಆಭರಣಗಳ ಬಳಕೆಯ ಸ್ಥಿತ್ಯಂತರಗಳನ್ನು ಕುರಿತು ವಿಶ್ಲೇಷಿಸುವ ಉದ್ದೇಶವನ್ನು ಈ ಅಧ್ಯಯನವು ಒಳಗೊಂಡಿದೆ.

**ಅಧ್ಯಯನದ ವ್ಯಾಪ್ತಿ**

ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿರುವ ಆಭರಣಗಳ ಸಾಂಸ್ಕೃತಿಕ ಮತ್ತು ಭಾಷಿಕ ವಿವರಗಳನ್ನು ಕುರಿತು ವಿಶ್ಲೇಷಿಸುವುದು ಈ ಅಧ್ಯಯನದ ವ್ಯಾಪ್ತಿಯಾಗಿರುತ್ತದೆ.

**ಅಧ್ಯಯನದ ಸ್ವರೂಪ**

ಪ್ರಸ್ತುತ ಪ್ರಬಂಧವನ್ನು ಮುಖ್ಯವಾಗಿ ಐದು ಅಧ್ಯಾಯಗಳಾಗಿ ವಿಭಾಗಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತುತ ವಿಷಯದ ಅಧ್ಯಯನ ಉದ್ದೇಶ, ವ್ಯಾಪ್ತಿ, ಸ್ವರೂಪ ಮತ್ತು ವಿಧಾನವನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯದಲ್ಲಿ ಇದುವರೆಗೆ ಆಭರಣಗಳ ಕುರಿತು ನಡೆದಿರುವ ಅಧ್ಯಯನಗಳ ಸಮೀಕ್ಷೆ ಮಾಡಿ ವಿಶ್ಲೇಷಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಆಭರಣಗಳ ಕುರಿತು ವರ್ಗೀಕರಿಸಲಾಗಿದೆ. ಇದರಲ್ಲಿ ವಯೋಮಾನಕ್ಕನುಗುಣವಾಗಿ ಮಕ್ಕಳ, ಮಹಿಳೆಯರ ಹಾಗೂ ಪುರುಷರ ಆಭರಣಗಳ ವರ್ಗೀಕರಣವನ್ನು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಆಭರಣಗಳು ಮತ್ತು ಭಾಷೆ ಎಂದಿದ್ದು, ಇದರಲ್ಲಿ ಆಭರಣಗಳ ಭಾಷಿಕ ವಿವರಣೆ, ಆಭರಣಗಳ ಹೆಸರುಗಳಲ್ಲಿ ಏಕಪದ ಘಟಕಗಳು, ವಿಶೇಷಣಯುಕ್ತ ಘಟಕಗಳ ಕುರಿತು ಚರ್ಚಿಸಲಾಗಿದೆ. ಜೊತೆಗೆ ಆಭರಣಗಳಲ್ಲಿ ಇತರ ಭಾಷೆಯ ಪ್ರಭಾವಗಳ ಕುರಿತಾಗಿಯೂ, ಗಾದೆ, ಒಗಟು, ಒಡಪುಗಳಲ್ಲಿ ಆಭರಣಗಳ ಕುರಿತಾಗಿ ಬಂದಿರುವ ವಸ್ತು ವಿಷಯಗಳನ್ನು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಆಭರಣಗಳ ಕುರಿತಾಗಿ ಇರುವ ನಂಬಿಕೆ, ಆಚರಣೆ ಮತ್ತು ನಿಷೇಧಗಳನ್ನು ಹಾಗೂ ಪ್ರಸ್ತುತ ದಿನಗಳಲ್ಲಿ ಆಭರಣಗಳ ಬಳಕೆಯ ಸ್ಥಿತ್ಯಂತರಗಳನ್ನು ಅವಲೋಕಿಸಲಾಗಿದೆ.

ಆರನೆಯ ಅಧ್ಯಾಯವು ಸಮಾರೋಪವಾಗಿದ್ದು, ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ನೀಡಲಾಗಿದೆ. ಅನುಬಂಧದಲ್ಲಿ ಅಧ್ಯಯನಕ್ಕೆ ಪೂರಕವಾದ ಪರಾಮರ್ಶನ ಗ್ರಂಥ ಸೂಚಿಯನ್ನು ಕೊಡಲಾಗಿದೆ.

**ಅಧ್ಯಯನದ ವಿಧಾನ**

ಪ್ರಸ್ತುತ ನಿಬಂಧವು 'ಆಭರಣಗಳು ಮತ್ತು ಭಾಷೆ' ಎಂದಿದ್ದು, ಅಧ್ಯಯನಕ್ಕೆ ಸಂಬಂಧಿಸಿದ ವಿವರಗಳನ್ನು ಉತ್ತರ ಕರ್ನಾಟಕದ ಕೆಲವು ಪ್ರದೇಶಗಳಿಗೆ ಭೇಟಿ ನೀಡಿ ಮಾಹಿತಿ ಸಂಗ್ರಹಿಸಿ ವಿವರಿಸಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಹಾಗೂ ಪೂರಕ ಗ್ರಂಥಗಳಿಂದ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಣೆಗೊಳಪಡಿಸಲಾಗಿದೆ.

❖❖❖

## ಅಧ್ಯಾಯ: ಎರಡು

# ಇದುವರೆಗಿನ ಅಧ್ಯಯನಗಳ ಸಮೀಕ್ಷೆ

**೧. ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ, ದಾನೇಶ ಎ.ಚೆಕ್ಕಿ:** ಇದರಲ್ಲಿ ಆಭರಣಗಳ ವಿಕಾಸ, ವಿವಿಧ ಸಮಾಜಗಳಲ್ಲಿ ಆಭರಣಗಳ ಸಂಪ್ರದಾಯದ ಬಗ್ಗೆ ಹಾಗೇ ಧಾರ್ಮಿಕ, ಮಾಂತ್ರಿಕ ಕಲ್ಪನೆಯ ಬಗ್ಗೆ ಸ್ವಲ್ಪ ಮಟ್ಟಿನ ತಿಳುವಳಿಕೆ ಪಡೆಯಬಹುದಾಗಿದೆ. ಹಾಗೇ ಆಭರಣಗಳ ವ್ಯಾಮೋಹ , ಪ್ರಾಧಾನ್ಯತೆ ಹಾಗೂ ಬದಲಾಗುತ್ತಿರುವ ಸಮಾಜದಲ್ಲಿ ಆಭರಣಗಳ ಮೌಲ್ಯ ಯಾವ ರೀತಿಯಲ್ಲಿದೆ ಎಂಬುದನ್ನು ಈ ಕೃತಿಯಿಂದ ತಿಳಿದುಬರುತ್ತದೆ.

**೨. ಗ್ರಾಮೀಣ ಉಡುಗೆ ತೊಡುಗೆಗಳು, ದೇವೇಂದ್ರ ಕುಮಾರ ಹಕಾರಿ:** ಗ್ರಾಮೀಣ ಉಡುಗೆ ತೊಡುಗೆಗಳು ಎಂಬ ಕೃತಿಯಲ್ಲಿ ಪ್ರಾಚೀನ ಕಾಲದಿಂದಲೂ ಗ್ರಾಮೀಣರು ಬಳಸುತ್ತಿದ್ದ ಉಡುಗೆ-ತೊಡುಗೆಗಳು ಅವರ ವೃತ್ತಿ ವಾತಾವರಣಕ್ಕೆ ತಕ್ಕಂತೆ ರೂಪುಗೊಳ್ಳುತ್ತಿದ್ದವು. ಮೊದಮೊದಲು ಕೇವಲ ಮೈ ಮುಚ್ಚುವುದಕ್ಕಾಗಿ ರೂಪುಗೊಂಡ ಈ ಉಡುಗೆ-ತೊಡುಗೆಗಳು ಕಾಲಕ್ರಮೇಣ ಸೌಂದರ್ಯಕ್ಕೆ ಒಳಪಟ್ಟಿದೆ. ಇತ್ತೀಚೆಗೆ ಅಗತ್ಯಕ್ಕಿಂತ ಹೆಚ್ಚಿನ ಅಂದಚೆಂದ ರೂಪುಗೊಂಡು ಹೆಚ್ಚಾಗಿ ಮಾರ್ಪಟ್ಟಿವೆ.

ಇಲ್ಲಿ ಪ್ರದೇಶ, ವೃತ್ತಿ, ಜನಾಂಗಿಕ ನಂಬಿಕೆ, ಧರ್ಮ ಮತ್ತು ಸಂಪ್ರದಾಯಗಳಿಗೆ ಅನುಸಾರವಾಗಿ ರೂಪ ಪಡೆಯುವುದನ್ನು ನಾವಿಲ್ಲಿ ನೋಡಬಹುದಾಗಿದೆ. ಇಲ್ಲಿ ಜಿಲ್ಲೆಯ ವಿಭಿನ್ನತೆಯನ್ನು ನೋಡಬಹುದಾಗಿದೆ. ಅಲ್ಲಿರುವ ಜನಾಂಗದವರ ಆಭರಣಗಳ ಭಿನ್ನತೆ ವಯೋಮಾನಕ್ಕನುಗುಣವಾದಂತಹ ಆಭರಣಗಳನ್ನು ನೋಡುತ್ತೇವೆ. ನಂಬಿಕೆ, ಆಚರಣೆಯ ಕುರಿತಾದಂತಹ ಅದಕ್ಕೆ ತಕ್ಕಂತೆ ಆಭರಣಗಳ ಮಾಹಿತಿ ತಿಳಿಯಬಹುದಾಗಿದೆ.

**೩. ಜನಪದ ಆಭರಣಗಳು, ಸೌಭಾಗ್ಯವತಿ.ಕೆ:** ಜನಪದ ಸಮಾಜ ಒಂದು ದೇಶದ ಅಥವಾ ಒಂದು ಭಾಷೆಯನ್ನಾಡುವ ವಿಶಾಲ ಮಾನವ ಸಮಾಜದ ಒಂದಂಗ ಮಾತ್ರ. ಜಾನಪದರಾದರೂ ಪ್ರಾಚೀನ ಕಾಲದ ಆದಿವಾಸಿಗಳಂತೆ ಗುಡ್ಡಗಾಡಿನಲ್ಲೋ, ಗುಹೆಗಳಲ್ಲೋ ವಾಸಿಸುತ್ತಿಲ್ಲ. ವಿಶಾಲ ಸಮಾಜದೊಳಗೆ ಅದರಲ್ಲೂ ನಾಗರಿಕ ಸಮಾಜದ ಆಸುಪಾಸಿನಲ್ಲೇ ಮೊದಲಿನಿಂದಲೂ ವಾಸ ಮಾಡುತ್ತಾ ಬಂದಿದ್ದಾರೆ. ಈ ಕೃತಿಯಲ್ಲಿ ಆಭರಣಗಳ ಹಿಂದಿನ ಇತಿಹಾಸ, ಸಂಸ್ಕೃತಿ ಹಾಗೂ

ಸೌಂದರ್ಯ ಪ್ರಜ್ಞೆಗಳ ವಿವಿಧ ನಮೂನೆ ಅಥವಾ ಬಗೆಯ ಸಿದ್ಧವಾದ ಆಭರಣಗಳ ಬಗ್ಗೆ ತಿಳಿಸಲಾಗಿದೆ.

ಧಾರ್ಮಿಕ, ಸಾಂಸ್ಕೃತಿಕ, ಆಚಾರ, ಸಂಪ್ರದಾಯಗಳಿಗೆ ತಕ್ಕಂತೆ ಆಭರಣಗಳು ಹಾಗೂ ಹೆಣ್ಣು-ಗಂಡು ಧರಿಸುವ ಆಭರಣಗಳ ಬಗೆಗಳನ್ನು ತಿಳಿಯಬಹುದಾಗಿದೆ. ಆಭರಣಗಳ ಚರಿತ್ರೆ ಹಾಗೂ ಆಭರಣಗಳಿಗೆ ತಕ್ಕಂತೆ ಗಾದೆ, ಒಗಟು ಹಾಗೂ ನಂಬಿಕೆ, ಆಚರಣೆಯ ಮಾಹಿತಿಯನ್ನು ನಾವಿಲ್ಲಿ ತಿಳಿಯಬಹುದಾಗಿದೆ.

**೪. ಉತ್ತರ ಕನ್ನಡ ಜಿಲ್ಲೆಯ ಕೆಲವು ಬುಡಕಟ್ಟುಗಳಲ್ಲಿ ಪ್ರಸಾಧನ ಕಲೆ, ಸವಿತಾ ನಾಯಕ:** ಇದರಲ್ಲಿ ಉತ್ತರ ಕನ್ನಡ ಜಿಲ್ಲೆ ಮತ್ತು ಬುಡಕಟ್ಟುಗಳ ಸಂಸ್ಕೃತಿ, ಆಚರಣೆ, ಸಂಪ್ರದಾಯಗಳಿಗೆ ತಕ್ಕಂತೆ ಆಭರಣಗಳ ಮಾಹಿತಿ ಹೇಳಲಾಗಿದೆ. ಆಭರಣಗಳಲ್ಲಿ ಬುಡಕಟ್ಟುಗಳ ಆಭರಣಗಳು ಬಹಳ ಪ್ರಾಮುಖ್ಯತೆಯನ್ನು ಪಡೆದಿದೆ. ಪೂರ್ವಕಾಲದಿಂದಲೂ ಅವರು ಅನುಸರಿಸಿಕೊಂಡು ಬಂದಂತಹ ಆಭರಣಗಳನ್ನು ಧರಿಸಿರುವುದನ್ನು ತಿಳಿಯಬಹುದಾಗಿದೆ.

**೫. ಜಾನಪದ ಸಾಹಿತ್ಯ ದರ್ಶನ, ಮುರಿಗೆಪ್ಪ.ಎ:** ಆಯಾ ಪ್ರಾಂತ್ಯಗಳಿಗೆ ತಕ್ಕಂತೆ ಆಭರಣಗಳ ಭಿನ್ನತೆ ನೋಡಬಹುದು. ಹಾಗೂ ವಿವಿಧ ಧರ್ಮ ಹಾಗೂ ಜನಾಂಗಗಳಲ್ಲಿ ಉಡುಗೆ-ತೊಡುಗೆಗಳಲ್ಲಿ ವ್ಯತ್ಯಾಸವಿದ್ದಂತೆ ಆಭರಣಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ನಾವೆಲ್ಲ ಭಾರತೀಯರು ಎಂದು ಹೇಳಿಕೊಂಡರೂ ಸಹ ಆಯಾ ಸಮುದಾಯಗಳ ನಂಬಿಕೆ, ಆಚಾರ, ಸಂಪ್ರದಾಯಗಳಲ್ಲಿ ವ್ಯತ್ಯಾಸವಿರುವುದು ಕಂಡುಬರುತ್ತದೆ. ಭಾಷಾ ಪ್ರಾಂತ್ಯಗಳಾಗಿ ವಿಂಗಡಣೆಯಾದ ರಾಜ್ಯಗಳಲ್ಲೂ ಸಹ ರಾಜ್ಯ ಭಾಷೆ ಒಂದೇ ಆದರೂ ಪ್ರಾದೇಶಿಕವಾಗಿ ಆ ಭಾಷೆಯನ್ನಾಡುವ ಜನರ ಭಾಷೆಯಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಹಾಗೆಯೇ ಉಡುಗೆ-ತೊಡುಗೆ ಮತ್ತು ಆಭರಣಗಳನ್ನು ಬಳಸುವಲ್ಲಿಯೂ ವಿವಿಧ ಮಾದರಿಗಳು ಕಂಡುಬರುತ್ತವೆ.

**೬. ಪಾಂಚಾಳ ವೃತ್ತಿ ಪದಕೋಶ, ಪಾಂಡುರಂಗಬಾಬು.ಡಿ:** ಪಾಂಚಾಳರಲ್ಲಿ ವೃತ್ತಿ ಹೆಸರುಗಳೇ ಜಾತಿವಾಚಕಗಳಾಗಿವೆ. ಇಲ್ಲಿ ಚಿನ್ನ, ಬೆಳ್ಳಿಯ ಕೆಲಸ ಮಾಡುವವರು ಅಕ್ಕಸಾಲಿಗರೆಂದು ಹೇಳಬಹುದು. ಕೆಲವು ವೃತ್ತಿಗಳ ನಿರ್ಮಾಣಗಳಿಗೆ ಸಂಬಂಧಿಸಿದ ಪದಗಳಿಗೆ ತೀವ್ರತರವಾದ ಬೆಳವಣಿಗೆಯಾಗಲಿ, ಬದಲಾವಣೆಗಳಾಗಲಿ ಇರುವುದಿಲ್ಲ. ಅಕ್ಕಸಾಲಿಗರು ತಯಾರಿಸಿದ ಚಿನ್ನಾಭರಣಗಳ ಹೆಸರುಗಳು ಕಾಲಕ್ಕೆ ತಕ್ಕಂತೆ ಬದಲಾಗುತ್ತಿರುತ್ತವೆ. ತಾಲಿ, ಕಡಗ, ಡಾಬು, ಮೂಗುತಿಗಳು ಶಾಶ್ವತವಾದ ಪದಗಳಾದರೆ, ಕತ್ತಿಗೆ ಧರಿಸುವ, ಕಿವಿಗೆ ಧರಿಸುವ ಆಭರಣಗಳು ಆಗಾಗ ಬದಲಾಗುವ ಹೊಸದಾಗಿ ಬಂದು ಸೇರುವ ಪದಗಳಿಂದ ಬದಲಾವಣೆಗಳನ್ನು ನೋಡಬಹುದು. ಕಾಸಿನ ಸರ, ಗುಂಡಿನ ಸರ, ಇದ್ದಲಿ ನೆಕ್ಲೇಸು, ಪ್ಲೇನ್ ಸರ, ಅವಲಕ್ಕಿ ಸರಗಳು ಎಂಬಂತಹ ಪದಗಳು ಬಂದಿರುವುದನ್ನು ನೋಡುತ್ತೇವೆ.

ಹಾಗೆಯೇ ಇತರೆ ಜನಾಂಗದವರ ವೃತ್ತಿ ಪ್ರದೇಶದಿಂದಾಗಿ ಅನೇಕ ಬಗೆಯ ಪದಗಳು ದಾಖಲಾಗಿವೆ. ಹೀಗೆ ಆಭರಣಗಳಿಗೆ ಸಂಬಂಧಿಸಿದ ಪದಗಳಿಗೆ ವಿನ್ಯಾಸಗಳು ಬದಲಾದಂತೆಲ್ಲಾ

ಅನೇಕ ಹೊಸ ಪದಗಳು ಹುಟ್ಟಿಕೊಳ್ಳುವುದನ್ನು ತಿಳಿಯಬಹುದಾಗಿದೆ. ಹಾಗೆಯೇ ಅನ್ಯ ದೇಶೀ ಪದಗಳು ಮತ್ತು ಕನ್ನಡದ ಪದಗಳೊಂದಿಗೆ ಅನ್ಯದೇಶಿ ಪದಗಳು ಸೇರಿ ವಿಶಿಷ್ಟವಾದ ಹೊಸ ಪದಗಳು ಸೃಷ್ಟಿಯಾಗುತ್ತಿರುವುದನ್ನು ಇಲ್ಲಿ ನೋಡಬಹುದಾಗಿದೆ.

❖❖❖

# ಅಧ್ಯಾಯ : ಮೂರು

# ಆಭರಣಗಳ ವರ್ಗೀಕರಣ

# ಅಧ್ಯಾಯ: ಮೂರು

# ಆಭರಣಗಳ ವರ್ಗೀಕರಣ

## ಆಭರಣಗಳ ಇತಿಹಾಸ

ಪ್ರತಿಯೊಬ್ಬ ವ್ಯಕ್ತಿಯ ಮೂಲನೆಲೆ ಹಳ್ಳಿಯೇ ಆಗಿದೆ. ನಮ್ಮ ಪೂರ್ವಜರು ತಮ್ಮ ವಾಸದ ನೆಲೆಯನ್ನು ಭದ್ರಪಡಿಸಿಕೊಂಡದ್ದು ನದಿತೀರದ ಸಾಮಾನ್ಯ ಹಳ್ಳಿಗಳಲ್ಲಿ. ಬಹುಕಾಲದಿಂದಲೂ ಮನುಷ್ಯ ತನ್ನ ಕುಟುಂಬವನ್ನು ನಿರ್ಮಿಸಿಕೊಂಡು ಆಹಾರ, ವಿಹಾರ, ವಸತಿ, ವಸ್ತು ಮತ್ತು ಸಂತಾನಾಭಿವೃದ್ಧಿಗಾಗಿ ಒಟ್ಟಿಗೆ ಇದ್ದು ಬದುಕುವುದನ್ನು ಕಲಿತುಕೊಂಡಿದ್ದನೆಂಬುದು ಇತಿಹಾಸದ ಸಂಗತಿ, ಈ ನೆಲ ಹಿಂದಿನಿಂದಲೂ ಹೆಚ್ಚಿನ ಭಾಗ ನೀರು ಮತ್ತು ಅರಣ್ಯ ಸಂಪತ್ತಿನಿಂದ ಕೂಡಿದ್ದು, ಪ್ರಾಣಿ, ಪಕ್ಷಿ, ಗಿಡ, ಮರಗಳಿಂದ ಶೃಂಗಾರಗೊಂಡು ಭೂಮಿ ಸಂಪದ್ಭರಿತವಾಗಿದೆ. ಯಾವಾಗ ಮನುಷ್ಯ ಅನಾಗರಿಕತೆಯಿಂದ ನಾಗರಿಕತೆಯ ಕಡೆಗೆ ಹೆಜ್ಜೆ ಇಡಲಾರಂಭಿಸಿದನೋ ಆಗ ಸಾಮಾಜಿಕ ಹಾಗೂ ಕೌಟುಂಬಿಕ ಸಂಘಟನೆಗಳು ಗೋಚರಿಸಲಾರಂಭಿಸಿದವು.

"ವಸತಿಗಾಗಿ ಕಲ್ಬೆಟ್ಟಗಳು, ಆಹಾರಕ್ಕಾಗಿ ಬೇಟೆ, ಉಪಜೀವನಕ್ಕಾಗಿ ಕೃಷಿಗೆ ಕ್ರಮೇಣ ಮನುಷ್ಯ ತೊಡಗಿಸಿಕೊಂಡಂತೆಯೇ ಅವನಲ್ಲಿ ಬದುಕಿನ ವಿಲಾಸ ಗುಣಗಳು ಆರಂಭಗೊಳ್ಳತೊಡಗಿದವು. ಚನ್ನಾಗಿ ಬೇಟೆಮಾಡಿ ಹೊಟ್ಟೆ ತುಂಬಿಸಿಕೊಳ್ಳುವುದು. ಆಮೇಲೆ ಭದ್ರತೆಗಾಗಿ ವಸತಿ ಹೊಂದಿಸಿಕೊಳ್ಳುವುದು ಹಾಗೂ ಅಂತಿಮವಾಗಿ ಸಂತಾನೋತ್ಪತ್ತಿಗಾಗಿ ಪ್ರಾಕೃತಿಕ ಜೀವನಕ್ಕೆ ಮನುಷ್ಯ ಹೊಂದಿಕೆಯಾಗಿ ಜೀವನ ಕ್ರಮ ಪ್ರಾರಂಭಿಸಿದಾಗ ಅವನಲ್ಲಿ ಅಲಂಕಾರಿಕ ಗುಣಗಳು ನಿಶ್ಚಳವಾಗಿ ಕಾಣಿಸಿಕೊಳ್ಳತೊಡಗಿದವು.[೧]

ಭಾರತೀಯ ಇತಿಹಾಸ ಪರಂಪರೆಯಲ್ಲಿ ನಮಗೆ ಅನೇಕ ರೀತಿಯ ಆಭರಣಗಳು ಕೌತುಕಮಯ ಅಧ್ಯಯನ ಸಾಮಗ್ರಿ ಲಭ್ಯವಾಗುತ್ತಿದೆ. ಇತಿಹಾಸದ ಅಧ್ಯಯನದಲ್ಲಿ ದೊರೆಯುವ ಮಾಹಿತಿಯಂತೆ ಮನುಷ್ಯರಿಗೆ ಬಟ್ಟೆಯ ಕಲ್ಪನೆಯ ಮೊದಲೆ ಆಭರಣಗಳ ಕಲ್ಪನೆ ಇರುವುದು ಕಂಡು ಬರುತ್ತದೆ.

ತನ್ನ ಸುತ್ತಲಿನ ಪ್ರಕೃತಿಯ ದಿವ್ಯ ಸೌಂದರ್ಯವನ್ನು ನೋಡಿ ಶೃಂಗಾರಗುಣ ಬೆಳೆಸಿಕೊಳ್ಳಲು ತೊಡಗಿದನೆಂದು ತಿಳಿದುಬರುತ್ತದೆ. ಕಾಡಿನಲ್ಲಿ ದೊರೆತ ಹೂ, ಎಲೆ, ಬಳ್ಳಿಗಳನ್ನು ತನ್ನ ಅಲಂಕಾರದ ಸಾಮಗ್ರಿಗಳನ್ನಾಗಿ ಮೊದಲು ಬಳಸುತ್ತಿದ್ದರೆಂದು ಅನೇಕ ಇತಿಹಾಸ ಹಾಗೂ ಪುರಾತತ್ವ ಪರಿಣಿತರು ತರ್ಕಿಸುತ್ತಾರೆ.

**ಇತಿಹಾಸ ಪೂರ್ವದಲ್ಲಿ ಆಭರಣಗಳು**

ಮಧ್ಯಪ್ರದೇಶದ ಬಂಡೆಗವಿ ಚಿತ್ರಗಳಲ್ಲಿ 'ಮೂಳೆಗಳಿಂದ ಮಣಿಯಾಕಾರದಲ್ಲಿ ಮಾಡಿದ ಅದರಲ್ಲೂ ಹಕ್ಕಿಗಳ ಮೂಳೆಗಳಿಂದ ಮಾಡಿದ ಆಭರಣಗಳು ಆದಿಮ ಜನರಲ್ಲಿ ಜನಪ್ರಿಯವಾಗಿದ್ದವು. ಕೆಲವು ಮಣಿಗಳಿಂದ ಹಾಗೂ ಇಂದು ಗುರುತಿಸಲಾದಂತಹ ಲೋಹಗಳಿಂದ ತಯಾರಿಸಿದಂತಹ ಕೈ ಬಳೆಗಳನ್ನು ಗುಹಾ ಚಿತ್ರಗಳಲ್ಲಿ ಗುರುತಿಸಬಹುದು ಎಂದು ವಿ.ಎಸ್.ವಾಕಣ್‌ಕರ್ ಅವರು ಅಭಿಪ್ರಾಯ ಪಡುತ್ತಾರೆ.

ಆರಂಭದ ಕಾಲದಲ್ಲಿ ಭರತನ ನಾಟ್ಯಶಾಸ್ತ್ರವು ದೇಶದ ಬೇರೆ ಬೇರೆ ಅಂಗಗಳಿಗೆ ಮಾಲೆಯಂತೆ ಹಾಕಿಕೊಳ್ಳುವ, ದಾರದಿಂದ ಕಟ್ಟಿಕೊಳ್ಳುವ, ರಂಧ್ರಮಾಡಿ ಧರಿಸುವ ಹಲವಾರು ಆಭರಣಗಳನ್ನು ಹೆಸರಿಸುತ್ತದೆ. ಈ ಬಗೆಯ ಆಭರಣಗಳು ಆರಂಭಕಾಲದಿಂದಲೂ ಚಿತ್ರ ಶಿಲ್ಪಗಳಲ್ಲಿ ಕೆತ್ತಿರುವುದು ಕಂಡುಬರುತ್ತದೆ. ಕಾಲುಗಡಗವು ೪-೫ನೆಯ ಶತಮಾನಗಳ ಶಿಲ್ಪಗಳಲ್ಲಿ ಮಾತ್ರ ಒಂದೇ ಕಾಲಿಗೆ ಇದ್ದು ಅದರ ಹಿಂದು-ಮುಂದಿನ ಕಾಲದಲ್ಲಿ ಎರಡೂ ಕಾಲುಗಳಿಗೆ ಇರುವುದನ್ನು 'ಚೌರಲ್ಸ್ ಫೇಟ್ರ' ಅವರು ಗುರುತಿಸಿರುವರಾದರೂ ಕಾರಣ ನೀಡುವುದಿಲ್ಲ.

**ಐತಿಹಾಸಿಕ ಆಭರಣಗಳು**

"ಪ್ರತಿಯೊಂದು ವಸ್ತು ವಿಷಯಕ್ಕೂ ಇತಿಹಾಸದ ನೆರವು ಬೇಕಾಗುತ್ತದೆ. ಮನುಷ್ಯನ ಹುಟ್ಟಿಗೆ, ವಿಕಾಸಕ್ಕೆ ಹೇಗೆ ಇತಿಹಾಸವಿದೆಯೋ ಹಾಗೆಯೇ ಆಭರಣಗಳ ಮೂಲಕ್ಕೂ ಅವು ವಿಕಸನಗೊಂಡ ಬಗ್ಗೆ ಪುಟ್ಟ ಚರಿತ್ರೆಯೇ ಇದೆ.[೨]

"ಶಿಲಾಯುಗದ ಮೊದಲಲ್ಲಿ ಸುಮಾರು ಕ್ರಿ.ಪೂ ೨೦ ಸಾವಿರ ವರ್ಷಗಳಿಗೂ ಹಿಂದೆ ಮುನಷ್ಯರು ಒಡವೆಗಳನ್ನು ಬಳಸುತ್ತಿದ್ದರೋ ಇಲ್ಲವೋ ಎನ್ನುವುದು ಕಾಲ್ಪನಿಕ ಸಂಗತಿ.[೩] "ಹಳೆ ಶಿಲಾಯುಗದ ದ್ವಿತಿಯಾರ್ಧದಲ್ಲಿ ಸುಮಾರು ಕ್ರಿ.ಪೂ ೧೨ಸಾವಿರ ವರ್ಷಗಳ ಹಿಂದಿನ ಮತ್ತು ಹೊಸ ಶಿಲಾಯುಗದಲ್ಲಿ ಒಡವೆಗಳ ಬಗ್ಗೆ ಸಾಕ್ಷ್ಯಗಳಿವೆ.[೪]

"ಮಾನವನು ಕಾಡಿನಲ್ಲೇ ನೆಲೆಸಿದ್ದಾಗ ತನ್ನ ಸುತ್ತಲಿದ್ದ ಪ್ರಕೃತಿಯ ಸೌಂದರ್ಯಕ್ಕೆ ಬಗೆ ಬಗೆಯ ವೈಚಿತ್ರಕ್ಕೆ ಮನಸೋತ ಸೃಷ್ಟಿದೇವತೆಯ ಶೃಂಗಾರವೇ ವ್ಯಕ್ತಿಯ ಮಾನಸದ ಆರಂಭದಲ್ಲಿ

ಶರೀರ ಶೃಂಗಾರದ ಕಲ್ಪನೆಯನ್ನು ತಂದುಕೊಟ್ಟಿತು. ಹೂ, ಎಲೆ, ಬಳ್ಳಿಗಳಿಂದಲೇ ಅತಿ ಪ್ರಾಚೀನ ಆಭರಣಗಳಾದ ತೋಳ್ಬಂದಿ, ಮುಂದಲೆ ಹೂ, ದುಂಡು ಕಂಕಣ, ಸೊಂಟದ ಪಟ್ಟಿ, ಸರ, ಮಾಲೆಗಳಿಂದ ದೇಹವನ್ನು ಅಲಂಕರಿಸಿಕೊಳ್ಳುತ್ತಿದ್ದರು.

ಮನುಷ್ಯರ ಬೆಳವಣಿಗೆಯನ್ನು ಅಧ್ಯಯನ ಮಾಡುವಾಗ ಸರಣಿಯಂತೆ ಮಾನವರು ಬಟ್ಟೆ-ಬರೆಗಳನ್ನು ಉಪಯೋಗಿಸಿಕೊಳ್ಳುವುದಕ್ಕಿಂತಲೂ ಮುನ್ನವೇ ಆಭರಣಗಳಿಂದ ತನ್ನ ದೇಹಾಲಂಕಾರ ಮಾಡಿಕೊಳ್ಳುತ್ತಿದ್ದರೆಂಬುದು ತಿಳಿಯುತ್ತದೆ. ಇಂದಿಗೂ ಹಲವಾರು ಆದಿವಾಸಿ ಸಮುದಾಯಗಳಿಗೆ ಹತ್ತಿ ಬಟ್ಟೆಗಳಿಗಿಂತಲೂ ಬಣ್ಣ ಬಣ್ಣದ ಮಣಿಗಳು ಮತ್ತು ಪುಟ್ಟ ಆಭರಣಗಳೇ ತುಂಬಾ ಮುಖ್ಯವಾಗಿವೆ.[೫]

"ಪ್ರಪ್ರಥಮವಾಗಿ ಮಾನವರು ಪರಿಸರದಲ್ಲಿ ಸಿಗುತ್ತಿದ್ದ ಒಣಗಿದ ಹುಲ್ಲು, ಬೀಜ, ಬಳ್ಳಿ, ಬಿದಿರು, ಎಲುಬಿನ ತುಣುಕು, ಕವಡೆ, ಸಿಂಪು ಮುಂತಾದವುಗಳಿಂದ ಸಿಂಗರಿಸಿಕೊಂಡರು. ನಂತರ ಮರ, ಮಣ್ಣು, ಮಣಿ, ಹವಳ, ಹರಳುಗಳಿಂದ ಸೃಷ್ಟಿಸಿದ ಆಭರಣಗಳನ್ನು ಧರಿಸಿದರು. ಕ್ರಮೇಣ ತಾಮ್ರ, ಲೋಹ, ಸತು, ಹಿತ್ತಾಳೆ, ಬಂಗಾರ, ಬೆಳ್ಳಿಯಿಂದ ತಯಾರಿಸಿದ ಆಭರಣಗಳನ್ನು ಧರಿಸತೊಡಗಿದರು.[೬]

"ಆದಿಮಾನವರು ಆಭರಣಗಳನ್ನು ವಿಕಾಸ ಅಂಗಳದಲ್ಲಿ ಕಾಲಿಕ್ಕುವ ಮೊದಲು ಆಭರಣಗಳ ಚಿತ್ತಾರವನ್ನೆಲ್ಲ ಹಚ್ಚೆಯಲ್ಲೇ ಕಾಣುತ್ತಿದ್ದರಂತೆ. ಆಭರಣಗಳಿಗೆ ಮೂಲ ಪ್ರೇರಣೆ 'ಹಚ್ಚೆ'. ಹಚ್ಚೆಯಲ್ಲಿ ಹೂ, ಬಳ್ಳಿ, ಗಿಡ, ಮರ, ಪ್ರಾಣಿ ಮುಂತಾದ ಚಿತ್ರಗಳನ್ನೇ ಬಿಡಿಸುತ್ತಿದ್ದರಂತೆ.[೭]

ಅನೇಕ ಆದಿವಾಸಿ ಜನರು ಅರೆ ಬತ್ತಲೆಯಾಗಿದ್ದರೂ ಸಹ ಸಾಕಷ್ಟು ಆಭರಣಗಳನ್ನು ಮೈತುಂಬ ಧರಿಸಿಕೊಂಡಿರುವುದನ್ನು ಕಾಣಬಹುದು. ಮನುಷ್ಯ ಎಲ್ಲಾ ಸಂದರ್ಭಗಳಲ್ಲೂ ಆಭರಣಗಳನ್ನು ಧರಿಸಿಯೇ ಇರಲಾಗುವುದಿಲ್ಲ. ಒಂದಲ್ಲ ಒಂದು ಬಾರಿ ಎಲ್ಲವನ್ನು ತೆಗೆದಿಡುತ್ತೇವೆ. ಆದರೆ ಹಚ್ಚೆಯನ್ನು ಆಭರಣಗಳಂತೆ ಪ್ರತ್ಯೇಕವಾಗಿರಿಸಲಾಗುವುದಿಲ್ಲ. ಹಚ್ಚೆಯ ಬೊಟ್ಟನ್ನು ಹೆಣ್ಣಿನ ಹಣೆಗೆ ಇಡಬೇಕೆಂಬ ನಿಯಮವಿತ್ತು. ದ್ರಾವಿಡರಿಗಂತೂ ಹಚ್ಚೆ ಮುತ್ತೈದೆತನದ ಸಂಕೇತವಾಗಿತ್ತು.

"ಹಚ್ಚೆ ಚುಚ್ಚಿಕೊಳ್ಳುವ ಪುರಾತನ ಪದ್ಧತಿಯ ಕಾಲ ಗತಿಸಿದಂತೆ ಸಮಾಜದಲ್ಲಿ ಸೌಂದರ್ಯ ಪ್ರಜ್ಞೆ ಪರಿಜ್ಞಾನಗಳ ಹೆಚ್ಚಳವಾಗಿ ಸ್ತ್ರೀ ಪುರುಷರು ತಮ್ಮ ದೇಹದ ಮತ್ತು ಮುಖಗಳಿಗೆ ಗಂಧ, ಕುಂಕುಮ, ಕಾಡಿಗೆ, ಅರಿಶಿಣ, ಮದರಂಗಿ ಅನೇಕ ರೀತಿಯ ವಿವಿಧ ಕಾಂತಿವರ್ಧಕಗಳು, ಪ್ರಸಾಧನಗಳು ಹಿಂದಿನ ಕಾಲದ ಜನರ ಸೌಂದರ್ಯಾಸಕ್ತಿ, ಲಾವಣ್ಯವನ್ನು ಹೆಚ್ಚಿಸಿಕೊಳ್ಳುವ ಮನೋಬಯಕೆಗಳನ್ನು ತೋರಿಸಿಕೊಡುತ್ತದೆ.[೮]

"ಸಿಂಧೂ ನದಿ ತೀರದ ಮೊಹೆಂಜೊದಾರೊ ಮತ್ತು ಹರಪ್ಪಾಗಳಲ್ಲಿ ದೊರೆತ ಅವಶೇಷಗಳಿಂದ (ಕ್ರಿ.ಪೂ. ೩೦೦೦ವರ್ಷಗಳ) ಆಗಿನ ಕಾಲದ ಜನರು ಅನೇಕ ವಸ್ತುಗಳು ಮತ್ತು ವಿವಿಧ ಧಾತುಗಳಿಂದ ಮಾಡಿದ ಆಭರಣಗಳನ್ನು ಹೇರಳವಾಗಿ ಧರಿಸುತ್ತಿದ್ದರೆಂದು ತಿಳಿದು ಬಂದಿದೆ. ಚಿಪ್ಪು, ಶಂಖ, ಕವಡೆ, ಮಣಿ, ಜೇಡಿಮಣ್ಣು, ಹಸ್ತಿದಂತ, ಬೆಳ್ಳಿ, ಬಂಗಾರ, ರತ್ನಗಳಿಂದ ತಯಾರಿಸಿದ ಕೊರಳಹಾರ, ನಡುಪಟ್ಟಿ(ಕಟಿಬಂದ) ಮತ್ತು ಕೈ ಬಳೆಗಳು ದೊರೆತಿವೆ. ಹಸ್ತಿದಂತಹ ಹಣೆಗೆ ತಾಮ್ರದ ಕೊಳವೆ, ಬಿರುದೆಗಳನ್ನು ಆಭರಣಗಳೆಂದು ಧರಿಸುತ್ತಿದ್ದರೆಂದು ತರ್ಕಿಸಲಾಗಿದೆ. ಆ ಕಾಲದಲ್ಲಿ ಸ್ತ್ರೀ ಪುರುಷರೆಲ್ಲ ಆಭರಣಗಳನ್ನು ಧರಿಸುತ್ತಿದ್ದರು. ಕರ್ಣಾಭರಣ, ಕೊರಳ ಹಾರ, ತೋಳ ಬಳೆ, ಉಂಗುರ, ಒಡ್ಯಾಣಗಳನ್ನು ಧರಿಸುತ್ತಿದ್ದರು. ಕವಡೆ, ಮಣಿ, ಶಂಖ, ಬೆಳ್ಳಿ, ಬಂಗಾರದ ಆಭರಣಗಳಲ್ಲದೆ ತಾಮ್ರ, ಕಂಚುಗಳಿಂದ ಮಾಡಿದ ಆಭರಣಗಳನ್ನು ಹೆಚ್ಚು ಉಪಯೋಗದಲ್ಲಿದ್ದವೆಂದು ಇತಿಹಾಸದಿಂದ ತಿಳಿದುಬರುತ್ತದೆ.[೬]

ಮೊಹೆಂಜೋದಾರೊ ಮತ್ತು ಹರಪ್ಪಾಗಳಲ್ಲಿ ದೊರೆತ ಅವಶೇಷಗಳಲ್ಲಿ ಕಂಡು ಬರುವ ಆಭರಣಗಳ ವೈವಿಧ್ಯ ಮತ್ತು ವೈಪುಲ್ಯ ಆಗಿನ ಜನರ ಆಭರಣ ವ್ಯಾಮೋಹ, ಅಲಂಕಾರ ಪ್ರಿಯತೆಯನ್ನು ವ್ಯಕ್ತಪಡಿಸುತ್ತದೆ.

ಸಿಂಧೂ ಕಣಿವೆ ನಾಗರೀಕತೆಯ ಪ್ರದೇಶದಲ್ಲಿ ಮಣಿಯುಕ್ತವಾದ ಆಭರಣಗಳು ದೊರೆತಿದೆ. ಅಲ್ಲದೆ ಸಾಂಚಿ, ಅಮರಾವತಿ ಶಿಲ್ಪಗಳಲ್ಲಿಯೂ ಅಜಂತದ ಚಿತ್ರಗಳಲ್ಲೂ ಜನಸಾಮಾನ್ಯರಿಂದ ರಾಜ ಮಹಾರಾಜರವರೆಗೆ ಎಲ್ಲಾ ಸ್ತ್ರೀ ಪುರುಷರು ಆಭರಣಗಳನ್ನು ಧರಿಸುತ್ತಿದ್ದುದು ಕಂಡು ಬರುತ್ತದೆ.

"ಸಮಾಜದಲ್ಲಿ ಆಭರಣಗಳನ್ನು ದೇಹಾಲಂಕಾರಕ್ಕಾಗಿ ಹೆಚ್ಚಾಗಿ ಉಪಯೋಗಿಸಿದರೂ ಪ್ರಾಚೀನ ಕಾಲದಿಂದಲೂ ಅನೇಕ ಜನರು ಧರಿಸುತ್ತಿರುವ ತಾಯಿತ, ಅಂತ್ರ, ರಕ್ಷಾಮಣಿಗಳನ್ನು ಮೊದ ಮೊದಲು ರೋಗ ನಿವಾರಕ್ಕಾಗಿ ಮತ್ತು ರಕ್ಷಣಾ ಸಾಧನೆಗಳೆಂದು ಮಾತ್ರ ಉಪಯೋಗಿಸಿದರೂ ದೇಹ ಶೃಂಗಾರವನ್ನು ಮಾಡಿಕೊಳ್ಳಲು ಸಹ ಅವುಗಳನ್ನು ಧರಿಸಿರುವುದು ಕಂಡು ಬಂದಿದೆ.[೧೦]

**೩. ಆಭರಣಗಳ ವರ್ಗೀಕರಣ**

ಪ್ರಾಚೀನ ಕಾಲದಿಂದಲೂ ಉಡುಗೆ-ತೊಡುಗೆಗಳು ಅವರವರ ವೃತ್ತಿಗೆ, ವಾತಾವರಣಕ್ಕೆ ತಕ್ಕಂತೆ ರೂಪುಗೊಳ್ಳುತ್ತಿದ್ದವು. ಮೊದಮೊದಲು ಕೇವಲ ದೇಹದ ರಕ್ಷಣೆಗಾಗಿ ರೂಪುಗೊಂಡ ಈ ಉಡುಪುಗಳು ಕಾಲಕ್ರಮೇಣ ಸೌಂದರ್ಯ ಸೂಚಕವಾಗಿ ಮಾರ್ಪಾಡಾಗಿವೆ. ಕೆಲವು

ಆಭರಣಗಳನ್ನು ಸಂಪ್ರದಾಯ, ಆಚರಣೆ, ರೂಢಿ, ನಂಬಿಕೆಗಳ ಹಿನ್ನೆಲೆಯಲ್ಲಿ ಧರಿಸುತ್ತಿರುವುದು ಕಂಡುಬರುತ್ತದೆ. ಪ್ರಾಚೀನ ಕಾಲದಿಂದಲೂ ಇಂದಿನವರೆಗೆ ಪ್ರತಿಯೊಬ್ಬರು ಆಭರಣಗಳನ್ನು ಧರಿಸುವುದು ಕಂಡುಬರುತ್ತದೆ. ಪ್ರದೇಶ, ಜನಾಂಗ, ಜನಾಂಗದ ನಂಬಿಕೆ, ಧರ್ಮ ಮತ್ತು ಸಂಪ್ರದಾಯಗಳಿಗೆ ಅನುಸಾರವಾಗಿ ರೂಪು ಪಡೆಯುತ್ತಾ ಬಂದವು. ಈ ತೊಡುಗೆಗಳ ಬಗೆಗಿನ ಸಂಶೋಧಿತ ಮಾಹಿತಿಗಳು ಹಾಗು ಅವುಗಳ ಸಾಂದರ್ಭಿಕ ವಿಶ್ಲೇಷಣೆಯನ್ನು ಈ ಅಧ್ಯಯನ ಒಳಗೊಂಡಿದೆ.

“ಮೊದಲು ಹೂ, ಎಲೆ, ಬಳ್ಳಿಗಳಿಂದಲೇ ಆಭರಣಗಳನ್ನು ತಯಾರಿಸಿಕೊಳ್ಳುತ್ತಿದ್ದರು. ಜೊತೆಗೆ ಬೀಜ, ಬಿದಿರು, ಅಸ್ಥಿದಂತ, ಎಲುಬಿನ ತುಣುಕು, ಕವಡೆ, ಸಿಂಪು ಮುಂತಾದವುಗಳಿಂದ ಸಿಂಗರಿಸಿಕೊಳ್ಳುತ್ತಿದ್ದರು. ನಂತರ ಮಣಿ, ಹವಳ, ಹರಳುಗಳಿಂದ ಸೃಷ್ಟಿಯಾದ ಆಭರಣಗಳನ್ನು ಧರಿಸಿದರು. ಪ್ರಕೃತಿಯಲ್ಲಿರುವ ಶೃಂಗಾರ ಸಾಧನಗಳನ್ನು ತೊಡುತ್ತಿದ್ದರು. ಹೀಗೆ ಆಭರಣಗಳ ಕಲ್ಪನೆ ಬಂದಿರಬಹುದೆಂದು ಊಹಿಸಬಹುದು. ತಾಯಿತ, ಅಂತ್ರ, ರಕ್ಷಾಮಣಿಗಳನ್ನು ಮೊದಮೊದಲು ರೋಗ ನಿವಾರಣೆಗಾಗಿ ಮತ್ತು ರಕ್ಷಣಾ ಸಾಧನೆಗಳೆಂದು ಮಾತ್ರ ಉಪಯೋಗಿಸಿದ್ದರೂ, ನಂತರದಲ್ಲಿ ದೇಹದ ಶೃಂಗಾರಕ್ಕಾಗಿ ಆಭರಣಗಳನ್ನು ಧರಿಸುವುದು ನೋಡಬಹುದು.”

ಆಭರಣಗಳ ಮೇಲೆ ಹೆಂಗಸರ ವ್ಯಾಮೋಹ, ಅಭಿರುಚಿಯನ್ನು ನಾವು ವ್ಯಾಪಕವಾಗಿ ನೋಡಬಹುದು. ಇಷ್ಟಾದರೂ ಆಭರಣಗಳು ಹೆಂಗಸರಿಗೆ ಮಾತ್ರ ಸೀಮಿತವೇನಲ್ಲ. ಮಕ್ಕಳಿಗೆ, ಪುರುಷರಿಗೆ ಸಹ ವಿಶಿಷ್ಟವಾದ ಆಭರಣಗಳಿವೆ. ಜನರು ತಾವು ಸೃಷ್ಟಿಸಿದ ದೇವರುಗಳಿಗೂ ಸಹ ಆಭರಣಗಳನ್ನು ತೊಡಿಸುವುದನ್ನು ಸಹ ನಾವು ನೋಡಬಹುದು. ವಯೋಮಾನಕ್ಕನುಗುಣವಾಗಿ ಆಭರಣಗಳ ಬಳಕೆಯನ್ನೂ ಸಹ ನೋಡಬಹುದು. ಹೀಗೆ ಆಭರಣಗಳಲ್ಲಿ ಮಹಿಳೆಯರ ಆಭರಣಗಳು, ಪುರುಷರ ಆಭರಣಗಳು ಹಾಗೂ ಮಕ್ಕಳ ಆಭರಣಗಳೆಂದು ವಿಂಗಡಿಸಬಹುದಾಗಿದೆ. ಇವುಗಳಲ್ಲಿ ವಿವಿಧ ರೀತಿಯ ಹೆಸರು ಆಭರಣಗಳಿಗೆ ಒಂದೇ ಹೆಸರು ಇರುವುದನ್ನು ಸಹ ನಾವಿಲ್ಲಿ ಕಾಣಬಹುದಾಗಿದೆ.

ಮಹಿಳೆಯರು ಸಂದರ್ಭಕ್ಕೆ ತಕ್ಕಂತೆ ಹಬ್ಬ-ಹರಿದಿನಗಳಲ್ಲಿ, ಮದುವೆಯಲ್ಲಿ ಹೀಗೆ ವಿವಿಧ ರೀತಿಯ ಆಭರಣಗಳು ತೊಡುವುದನ್ನು ನೋಡುತ್ತೇವೆ.

ಪುರುಷರು ಮಹಿಳೆಯರಷ್ಟು ಆಭರಣಗಳನ್ನು ಧರಿಸದೇ ಇದ್ದರೂ ಸಹ ಅವರವರ ಆರ್ಥಿಕ ಸ್ಥಿತಿಗತಿಗನುಗುಣವಾಗಿ, ಸಂದರ್ಭಾನುಸಾರ ಪುರುಷರು ಸಹ ಆಭರಣಗಳನ್ನು ಧರಿಸುವುದನ್ನು ನಾವಿಲ್ಲಿ ಕಾಣಬಹುದು.

ಮಕ್ಕಳ ಆಭರಣಗಳು ದೇಹಾಲಂಕಾರಕ್ಕಿಂತ ಹೆಚ್ಚಾಗಿ ಅವರಲ್ಲಿ ಮುಂದೆ ಉಂಟಾಗಬಹುದಾದ ರೋಗಗಳು ಅಥವಾ ದೃಷ್ಟಿ ತಾಗುವ ಸಂಬಂಧ ಕುರಿತಾಗಿಯೇ ಮಕ್ಕಳಿಗೆ ಚಿಕ್ಕವರಿದ್ದಾಗ ಆಭರಣಗಳನ್ನು ತೊಡಿಸುವುದನ್ನು ನಾವು ಕಾಣಬಹುದು. ಹೀಗೆ ಆಭರಣಗಳನ್ನು ಮಹಿಳೆಯರು, ಪುರುಷರು ಹಾಗೂ ಮಕ್ಕಳು ಧರಿಸುತ್ತಿದ್ದರು. ಕಾರಣ ಏನೇ ಇದ್ದರೂ ಇವರೆಲ್ಲರೂ ಸಂದರ್ಭಕ್ಕೆ ತಕ್ಕಂತೆ ಆಭರಣಗಳನ್ನು ತೊಡುತ್ತಿದ್ದರೆಂಬುದನ್ನು ನಾವಿಲ್ಲಿ ಕಾಣಬಹುದು.

ಆಭರಣಗಳನ್ನು ಧರ್ಮ, ಜಾತಿಗಳಿಗನುಗುಣವಾಗಿಯೂ ಸಹ ನೋಡಬಹುದು. ಅಂದರೆ ಅವರು ಧರಿಸುವ ಆಭರಣಗಳ ಆಧಾರದಮೇಲೆ ಇವರು ಇಂಥಹ ಸಮುದಾಯದವರು ಎಂದು ಗುರುತಿಸಿಕೊಳ್ಳುವಷ್ಟರ ಮಟ್ಟಿಗೆ ಆಭರಣಗಳು ಪಾತ್ರ ವಹಿಸಿವೆ. ಹೀಗೆ ಆಭರಣಗಳು ವಯೋಮಾನಕ್ಕನುಗುಣವಾಗಿ ಹಾಗೂ ಜನಾಂಗಗಳಿನುಗುಣವಾಗಿ ಅವರವರ ಆಚಾರ, ವಿಚಾರ, ಸಂಪ್ರದಾಯಕ್ಕೆ ತಕ್ಕಂತೆ ಆಭರಣಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ.

ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿರುವ ಆಭರಣಗಳ ಸಾಂಸ್ಕೃತಿಕ ಮತ್ತು ಭಾಷಿಕ ವಿವರಗಳ ಕುರಿತು ವಿಶ್ಲೇಷಿಸಲಾಗಿದೆ.

ಆಭರಣವು ಇದು ಸೌಭಾಗ್ಯದ ಸಂಕೇತವಾಗಿದೆ. ಆಭರಣಗಳು ಪ್ರದೇಶದಿಂದ ಪ್ರದೇಶಕ್ಕೆ, ಜನಾಂಗದಿಂದ ಜನಾಂಗಕ್ಕೆ ಭಿನ್ನತೆಗಳನ್ನು ಹೊಂದಿವೆ. ಆಯಾ ಸಮುದಾಯಗಳಲ್ಲಿರುವ ನಂಬಿಕೆ, ಸಂಪ್ರದಾಯ, ಆಚರಣೆಗಳನ್ನು ಗಮನದಲ್ಲಿಟ್ಟುಕೊಂಡು ಆಭರಣ ಧರಿಸುವುದನ್ನು ನಾವು ಕಾಣಬಹುದು.

ಮಹಿಳೆಯರು ಧರಿಸುವ ಆಭರಣಗಳಲ್ಲಿ ಕೆಲವು ಶುಭ ಸಂಕೇತವಾಗಿ ಮತ್ತೆ ಕೆಲವು ಸೌಭಾಗ್ಯದ ಸಂಕೇತಗಳಾಗಿ ಕಂಡುಬರುತ್ತವೆ. ಸ್ಥಿತಿವಂತರಿಗೆ ಆಭರಣಗಳು ಶ್ರೀಮಂತಿಕೆಯ ಸಂಕೇತವಾಗಿಯೂ ಸಹ ಕಂಡುಬರುತ್ತವೆ. ಇಲ್ಲಿ ಮುಖ್ಯವಾಗಿ ಆಭರಣಗಳನ್ನು ಸೌಂದರ್ಯ ವರ್ಧಕವಾಗಿ ಬಳಸುವುದರ ಜೊತೆಗೆ ಸೌಭಾಗ್ಯದ ಸಂಕೇತಗಳಾಗಿ, ರೋಗ ನಿವಾರಕ ಶಕ್ತಿಗಳಾಗಿ, ದೈವತ್ವದ ಸಂಕೇತವಾಗಿಯೂ ಸಹ ಆಭರಣಗಳನ್ನು ಬಳಸುತ್ತಿರುವುದನ್ನು ನಾವು ನೋಡಬಹುದು.

ಕಾಲ ಬದಲಾದಂತೆ ಮನುಷ್ಯ ತನ್ನ ಪ್ರಯೋಗಶೀಲತೆಯಲ್ಲಿಯೂ ಹೊಸತನ್ನು ಕಂಡುಕೊಳ್ಳಲು ಪ್ರಾರಂಭಿಸಿದ. ಹಾಗಾಗಿ ಆಭರಣಗಳ ತಯಾರಿಕೆಯಲ್ಲಿಯೂ ಸಹ ಪ್ರಾಚೀನ ಕಾಲದಿಂದಲೂ ಬಳಸುತ್ತಿದ್ದ ಕೆಲವು ಹಳೆಯ ಮಾದರಿ ಆಭರಣಗಳಿಗೆ ಬದಲಾಗಿ ಹೊಸ ಹೊಸ ಮಾದರಿ ಆಭರಣಗಳ ತಯಾರಿಕೆಗೆ ಹೆಚ್ಚು ಒತ್ತು ನೀಡಿದ. ಕಾಲಕ್ಕೆ ತಕ್ಕಂತೆ, ಬೇಡಿಕೆಗೆ ತಕ್ಕಂತೆ, ಗ್ರಾಹಕರ ಹಿತಾಸಕ್ತಿಗೆ ತಕ್ಕಂತಹ ಹೊಸ ಹೊಸ ಮಾದರಿಗಳನ್ನು ಸಿದ್ಧಪಡಿಸತೊಡಗಿದೆ. ಈ ಹಿನ್ನೆಲೆಯಲ್ಲಿ ಉತ್ತರ ಕರ್ನಾಟದ ಆಭರಣಗಳನ್ನು ಈ ಅಧ್ಯಯದಲ್ಲಿ ಪರಿಶೀಲಿಸಲಾಗಿದೆ.

ಆಭರಣಗಳು ಜೀವನದ ವಿವಿಧ ರಂಗಗಳಲ್ಲಿ ಬಹು ಮಹತ್ವದ ಪಾತ್ರವನ್ನು ಪಡೆದಿವೆ. ಸೌಂದರ್ಯ ವರ್ಧನೆಗಾಗಿ, ಸಾಮಾಜಿಕ ಅಂತಸ್ತು, ಗೌರವಗಳಾಗಿ, ಶ್ರೀಮಂತಿಕೆಯ ಸಂಕೇತವಾಗಿ, ಸಂಪ್ರದಾಯಗಳ ಅನುಸರಣೆಗಾಗಿ ಆಭರಣಗಳ ಬಳಕೆ ಕಂಡುಬರುತ್ತದೆ.

ಆಭರಣಗಳಲ್ಲಿ ಭೇದ ಪ್ರಭೇದಗಳನ್ನು ನೋಡಬಹುದು. ರತ್ನ, ಮಾಣಿಕ್ಯ ಮುಂತಾದವುಗಳನ್ನು ಆಗರ್ಭ ಶ್ರೀಮಂತರು, ರಾಜ ಮಹಾರಾಜರು, ರಾಣಿಯರು ಬಂಗಾರ, ವಜ್ರಗಳಿಂದ ಸಿದ್ಧಪಡಿಸಿದ ಆಭರಣಗಳನ್ನು ಧರಿಸುತ್ತಿರುವುದನ್ನು ಕಾಣಬಹುದು. ಇನ್ನುಳಿದವರು ಬಂಗಾರ, ವಜ್ರಗಳಿಂದ ಸಿದ್ಧಪಡಿಸಿದ ಆಭರಣಗಳನ್ನು ಧರಿಸುತ್ತಿರುವುದನ್ನು ಕಾಣಬಹುದು. ಇನ್ನು ಮಧ್ಯಮ ವರ್ಗದ ಜನ ಕೊರಳಿಗೆ ಮತ್ತು ಕಿವಿಗೆ ಬಂಗಾರ ಹಾಗೂ ಕಾಲಿಗೆ ಬೆಳ್ಳಿಯ ಕಾಲುಂಗರಗಳನ್ನು ಧರಿಸುವುದನ್ನು ಕಾಣಬಹುದು.

"ಹಿಂದೂ ಸಮಾಜದಲ್ಲಿ ಸೌಂದರ್ಯವರ್ಧನೆಗೆ ಬಣ್ಣಗಳಿಂದ ದೇಹವನ್ನು ಅಲಂಕಾರಿಕವಾಗಿ ಸಿಂಗರಿಸಿಕೊಳ್ಳುವುದನ್ನು ಕಾಣಬಹುದು. ತರುಣಿಯರು ತಮ್ಮ ರೂಪ ಲಾವಣ್ಯಗಳನ್ನು ಹೆಚ್ಚಿಸಿಕೊಳ್ಳಲು ಗಂಧ, ಕುಂಕುಮ, ಅರಿಶಿಣ, ಕಾಡಿಗೆ ಮದರಂಗಿರಸ, ಮೆಹಂದಿಗಳನ್ನು ಹಚ್ಚಿಕೊಳ್ಳುತ್ತಿದ್ದರು. ಆದರೆ ಕಾಲ ಬದಲಾದಂತೆ ಅವುಗಳ ಸ್ಥಾನವನ್ನು ಈಗ ಸ್ನೋ, ಪೌಡರ್, ಕ್ರೀಮ್, ಲಿಪ್‌ಸ್ಟಿಕ್, ನೇಲ್‌ಪಾಲೀಶ್ ಮೊದಲಾದವುಗಳು ಪಡೆದುಕೊಂಡಿವೆ."[೨]

ಹಿಂದೆ ಬಟ್ಟೆಗಳನ್ನು ಕೈ ಮಗ್ಗದ ಮೂಲಕ ತಯಾರಿಸುವ ಮತ್ತು ಬಟ್ಟೆಗಳ ಮೇಲೆ ಹೊಸ ಮಾದರಿಯ ಚಿತ್ತಾರಗಳನ್ನು ಕೈಯಿಂದಲೇ ಸಿದ್ಧಪಡಿಸುತ್ತಿದ್ದರಿಂದ ಬೇಡಿಕೆಗನುಗುಣವಾಗಿ ಉಡುಪುಗಳನ್ನು ಸಿದ್ಧಪಡಿಸುವುದು ಸ್ವಲ್ಪ ಕಷ್ಟದ ಕೆಲಸವೇ ಆಗಿತ್ತು. ಆಧುನಿಕ ಯುಗದಲ್ಲಿ ಯಂತ್ರಗಳ ಮೂಲಕ ತ್ವರಿತವಾಗಿ ಮುದ್ರಿಸುವ ಕೆಲಸ ಪ್ರಾರಂಭವಾಗಿರುವುದರಿಂದ ಮಹಿಳೆಯರು ಧರಿಸುವ ಬಹುತೇಕ ಉಡುಪುಗಳಿಗೆ ಹೊಸ ಹೊಸ ಚಿತ್ತಾರಗಳನ್ನು ಮುದ್ರಿಸುವ ಕೆಲಸ ನಡೆದಿದೆ. ಜೊತೆಗೆ ಇಂದಿನ ಹೊಸ ಮಾದರಿಗಳು ನಾಳೆಗೆ ಇರುವುದಿಲ್ಲ. ಅವು ಚರಿತ್ರೆಯ ಪುಟ ಸೇರುತ್ತವೆ. ಹೀಗೆ ದಿನನಿತ್ಯ ಹೊಸ ಹೊಸ ಮಾದರಿ ಉಡುಪುಗಳು ಮಾರುಕಟ್ಟೆ ಬರುತ್ತಿದ್ದು, ಅವುಗಳನ್ನು ಕೊಳ್ಳುವ ಹಾಗೂ ಆಹ್ವಾನಿಸುವ ಜನರು ಹೆಚ್ಚಿರುವುದರಿಂದ ಹಳೆ ಮಾದರಿಯ ಉಡುಪುಗಳು ಮೂಲೆ ಗುಂಪಾಗುತ್ತಾ ಹೋಗುತ್ತಿವೆ.

ಉತ್ತರ ಕರ್ನಾಟಕದ ಆಭರಣಗಳಲ್ಲಿ ಒಂದಕ್ಕೆ ಹಲವಾರು ಹೆಸರುಗಳಿರುವುದನ್ನು ಕಾಣಬಹುದು. ಜನರ ಆಚಾರ, ವಿಚಾರ, ಸಂಪ್ರದಾಯಗಳಿಗೆ ತಕ್ಕಂತೆ ಆಭರಣಗಳ ಬಳಕೆಯನ್ನು ಕಾಣಬಹುದಾಗಿದೆ.

ಹಿಂದೂಗಳಲ್ಲಿ ಮುತ್ತೈದೆಯ ಸಂಕೇತವಾಗಿ ಕೋರಳಲ್ಲಿ ತಾಳಿ, ಹಣೆಗೆ ಕುಂಕುಮ, ಕೈಯಲ್ಲಿ ಬಳೆ, ಮೂಗಿನ ನತ್ತು, ಕಾಲುಂಗುರ ಇವುಗಳನ್ನು ಕಾಣಬಹುದು.

ಹೀಗೆ ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಆಭರಣಗಳನ್ನು ಧರಿಸುವ ಕ್ರಮ ಭಿನ್ನವಾಗಿರುತ್ತದೆ. ಅವರವರ ಆಚರಣೆ, ಸಂಪ್ರದಾಯಕ್ಕನುಗುಣವಾಗಿ ಅವುಗಳನ್ನು ಧರಿಸುವುದು ಕಂಡುಬರುತ್ತದೆ.

"ಭಾರತೀಯ ಮುಸ್ಲಿಂರು ಮುಸ್ಲಿಂಮೇತರ ಸಂಸ್ಕೃತಿಯ ಪ್ರಭಾವದಿಂದ ಆಭರಣಗಳನ್ನು ಹಾಕಿಕೊಳ್ಳುತ್ತಾರೆ. ಇವರು ನತನಿ(ನತ್ತು)ಲಚ್ಚಾ(ತಾಳಿ), ಬಂಗಡಿ(ಬಳೆ), ವಾಲೆ(ಓಲೆ), ಜೋಡವೆ(ಕಾಲುಂಗುರ)ಗಳನ್ನು ಮುತ್ತೈದೆಯ ಲಕ್ಷಣಗಳೆಂದು ನಂಬುತ್ತಾರೆ.[೧೩]

ಹಿಂದುಗಳು ಮೂಗುತಿಯನ್ನು ಸೌಭಾಗ್ಯದ ಸಂಕೇತವೆಂದು ತಿಳಿದುಕೊಂಡಿದ್ದಾರೆ. ಆದರೆ ಮುಸ್ಲಿಂರು ನತ್ಥನಿಗೆ(ಮೂಗುತಿ)ಗೆ ತೊಡುವುದಿಲ್ಲ. ಬದಲಾಗಿ ಇದು ಅಲಂಕಾರದ ಆಭರಣವೆಂದು ತಿಳಿದು ಹಾಕಿಕೊಳ್ಳುತ್ತಾರೆ. ಇವರಲ್ಲಿ ಕೆಲವರು ನತ್ಥನಿ ಧರಿಸಿದರೆ ಮತ್ತೆ ಕೆಲವರು ಚುಚ್ಚಿಕೊಳ್ಳುವ ಸಂಪ್ರದಾಯವಿಟ್ಟಿಕೊಂಡಿಲ್ಲ.

"ಉತ್ತರ ಭಾರತದಲ್ಲಿ ಮೂಗುತಿಯನ್ನು ನಥ್, ನಥಿಯಾ, ನಥ್ಥಾ ಎನ್ನುತ್ತಾರೆ. ನತ್ಥನಿ ಮೂಲತಃ ರಜಪೂತ ಸ್ತ್ರೀಯರ ನಾಸಿಕಾ ಆಭರಣವೆಂದು ಮೊಗಲ ದೊರೆಗಳ ಆಳ್ವಿಕೆಯಲ್ಲಿ ಮುಸ್ಲಿಂ ಸ್ತ್ರೀಯರಿಂದ ಸ್ವೀಕೃತವಾದ ಇದು ಕ್ರಮೇಣ ಹಿಂದೂಗಳ ಸೌಭಾಗ್ಯ ಲಕ್ಷಣಗಳಲ್ಲಿ ಸೇರ್ಪಡೆಯಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.[೧೪] ಇವರು ಕಾಲಿಗೆ ಬಂಗಾರದಾಭರಣ ಹಾಕದೇ ಬೆಳ್ಳಿಯಿಂದ ಮಾಡಿದ ಒಡವೆಗಳನ್ನು ಹಾಕುವುದು ಇವರ ಸಂಪ್ರದಾಯವಾಗಿದೆ.

ಉತ್ತರ ಭಾರತದ ಮುಸ್ಲಿಂ ಸ್ತ್ರೀಯರು ಪರಂಪರಾಗತವಾಗಿ ಬಂದಂತಹ 'ಕಮಾರ ಬಂದ' ಅಥವಾ 'ಲಿಜಾಂ' ಹಾಕುತ್ತಾರೆ. ಕಾರ್ನಾಟಕದ ಮುಸ್ಲಿಂರು ಬೆಳ್ಳಿಯಿಂದ ತಯಾರಿಸಿದ ಸಾದಾಪಟ್ಟಿ, ಮಿಂಚುಪಟ್ಟಿ, ಗೆಜ್ಜೆ ಪಟ್ಟಿಯನ್ನು ಸೊಂಟಕ್ಕೆ ಹಾಕುತ್ತಿದ್ದರು.

ಲಂಬಾಣಿ ಸಮುದಾಯದವರು "ಮುಂಗೂದಲಿಗೆ ಇಳಿಬಿಟ್ಟ ಘುಗುರಿ ಮತ್ತು ಮುಂಗೈಗಳಿಗೆ ಹಾಕಿರುವ ಚುಡೋ ಇವು ಇವರ ಮುತ್ತೈದೆಯ ಸಂಕೇತಗಳಾಗಿವೆ. ಹಾಗೆಯೇ ಥಾಲ್ಯ ಪಂಗಡದ ಸ್ತ್ರೀಯರು ಕೈಗಳಿಗೆ ಹಿತ್ತಾಳೆಯ ಬಳೆ 'ಟೋಪಾಲಿ', ಕೊರಳಿಗೆ ಕರಿಮಣಿಯ ಸರ ಇವು ಥಾಲ್ಯಾದವರು ಮಂಗಳ ಸೂತ್ರ, ಹಾಗೂ ಮುತ್ತೈದೆಯ ಸಂಕೇತವಾಗಿದೆ.[೧೫]

ಹೀಗೆ ವಿವಿಧ ರೀತಿಯಲ್ಲಿ ಜನಾಂಗೀಕ ದೃಷ್ಟಿಯಲ್ಲಿ ಆಭರಣಗಳನ್ನು ಮುತ್ತೈದೆಯ ಆಭರಣ ಎಂದು ತಿಳಿದು ಇಂದಿಗೂ ಅದನ್ನು ಹಾಕಿಕೊಳ್ಳುತ್ತಿದ್ದಾರೆ. ಆಭರಣಗಳು ವಯೋಮಾನಕ್ಕನುಗುಣವಾಗಿ ಮಹಿಳೆಯರು, ಮಕ್ಕಳು ಮತ್ತು ಪುರುಷರು ಧರಿಸುವ ಆಭರಣಗಳನ್ನು ವರ್ಗೀಕರಿಸಿಕೊಂಡು ವಿವರಿಸಲಾಗಿದೆ.

ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ ಸಮುದಾಯಕ್ಕೆ, ಧರ್ಮದಿಂದ ಧರ್ಮಕ್ಕೆ ಅವರವರ ಆಚಾರ, ವಿಚಾರ ಮತ್ತು ಸಂಪ್ರದಾಯಗಳಿಗನುಗುಣವಾಗಿ ಆಭರಣಗಳನ್ನು ಧರಿಸುತ್ತಿರುವುದರ ವಿವರಗಳನ್ನು ಪ್ರಸ್ತುತ ಅಧ್ಯಯನದಲ್ಲಿ ವಿವರಿಸಲಾಗಿದೆ.

## ಆಭರಣಗಳ ಹೆಸರುಗಳು

### ಕಂಠಾಭರಣಗಳು

ನೆಲ್ಲಿಕಾಯಿ ಸರ: ನೆಲ್ಲಿಕಾಯಿ ಆಕಾರದಲ್ಲಿರುವ ಒಂದು ಸರ

ಗುಂಡಿನ ಸರ: ಬಂಗಾರದ ಗುಂಡುಗಳಿದ ಸಿದ್ದಪಡಿಸಿದ ಸರ.

ಕಾಸಿನ ಸರ: ಬಿಲ್ಲೆ ಆಕಾರದಲ್ಲಿರುವ ಸರ

ಅವಲಕ್ಕಿ ಸರ : ಅವಲಕ್ಕಿ ಆಕಾರದಲ್ಲಿರುವ ಸರ

ಮಾವಿನಕಾಯಿ ಸರ : ಮಾವಿನಕಾಯಿ ಆಕಾರ ಹೊಂದಿರುವ ಆಭರಣ

ಕಾಫಿ ಬೀಜದ ಸರ : ಕಾಫಿ ಬೀಜದ ಆಕಾರ ಹೊಂದಿರುವ ಆಭರಣ

ಮಾಣಿಕ ಸರ : ಒಂದು ಜಾತಿಯ ರತ್ನದಿಂದ ಸಿದ್ಧಪಡಿಸಿದ ಆಭರಣ

ಪಂಚ ಸರ : ಐದೆಳೆಯನ್ನು ಹೊಂದಿರುವ ಸರ

ತ್ರಿಸರ : ಮೂರು ಎಳೆಯನ್ನು ಹೊಂದಿರುವ ಸರ

ಚೌಸರ : ನಾಲ್ಕು ಎಳೆಯನ್ನು ಹೊಂದಿರುವ ಸರ

ಮುತ್ತಿನ ಸರ : ಮುತ್ತುಗಳನ್ನು ಜೋಡಿಸಿ ಸಿದ್ಧಪಡಿಸಿದ ಸರ

ನೆಲ್ಲಿಗುಂಡಿನ ಸರ : ನೆಲ್ಲಿಕಾಯಿ ಆಕಾರದ ಗುಂಡುಗಳಿಂದ ಸಿದ್ದಪಡಿಸಿದ ಸರ

ಬವಳ ಸರ

ಮುತ್ತಿನೆಕ್ಕ ಸರ

ಮಣಿಸರ

ಕೊರಲಹತ್ತ ಸರ

ಬೋರ್ಮಾಳ್ಸರ

ಗೋದಿಸರ

ಮುತ್ತಿಸರ

ಕೊತ್ತಂಬರಿ ಬೀಜದ ಸರ

ಗುಂಡಿನ ಸರ

ಗುಂಡಿನ ಮಣಿಸರ

ಎಲೆಮಣಿಸರ

ಚಿನ್ನದ ಹೂಮ ಕೊಳವೆಯ ಸರ

ಹಾಲುಮಣಿ ಸರ

ಪವನ ಸರ: ಅಡ್ಡಿಕೆಯ ಒಂದು ಮಾದರಿ

ಕೊಳವೆ ಸರ

ಗರತಿ ಮಣಿ ಸರ

ಕಾಸಿನಸರ

ಪದ್ಕದ ಸರ

ಮೇಲ್ಗುಂಡ್ಸರ

ನಕ್ಷತ್ರ ಸರ

ಕಾಳಿಮಟ್ಟಿ ಸರ

ಹವಳದ ಸರ

ಆಮೆ ಹೊಟ್ಟೆಯ ಸರ

ಘರ್ಜಿಸರ

ಬಟಾಣಿ ಸರ

ಹವಳದ ಸರ

ನೆಕ್ಲೇಸ/ಕುತ್ತಿಗೆ ಸರ

ಮೂರೆಳೆಯ ಚಿನ್ನದ ಗುಂಡಿನ ಸರ : ಬಂಗಾರದ ಗುಂಡುಗಳನ್ನು ಪೋಣಿಸಿ ಮಾಡಿದ ಸರ

ಕರಿಮಣಿ ಚಿನ್ನದ ಗುಂಡಿನ ಸರ : ಕರಿಮಣಿ ಸರದಲ್ಲಿ ಚಿನ್ನದ ಗುಂಡು ಪೋಣಿಸಿ ಮಾಡಿದ ಸರ

ಮೋಹನ ಮಾಲೆ ಸರ

ಜೋಮಾಲೆ ಸರ

ಕಟ್ಬಾಣಿ ಸರ

ಪದಕದ ಸರ

ಮಲ್ಲಿಗೆ ಸರ

ನಾಗಸಂಪಿಗೆ ಸರ

ಟೀಕಿ ಸರ

ಕಾಸಿನ ಸರ

ಪಟ್ಟಿ ಸರ

ಚಪಲ ಸರ

ಪುತ್ತಲಿ ಸರ

ಅಷ್ಟದಳದ ಗುಂಡಿನ ಸರ

| | |
|---|---|
| ಮುತ್ತಿನ ಹಾರ | ನೀಲಮಣಿ ಹಾರ |
| ಅಚ್ಚು | ಕಂಟಿಕೆ |
| ಕೋವಿಮಣಿ | ಗಿಳಿ(ತಾಳಿಸರದ ಒಂದು ಆಭರಣ) |
| ಅಷ್ಟಪೈಲ್ ಗುಂಡು(ಗುಂಡಿನ ಒಂದು ವಿಧ) | ಜೋತಿಗುಂಡು(ಗುಂಡಿನ ಒಂದು ವಿಧ) |
| ದೊಡ್ಡುಂಡು(ಗುಂಡಿನ ಒಂದು ವಿಧ) | ನೆಲ್ಲಿಗುಂಡು(ಗುಂಡಿನ ಒಂದು ವಿಧ) |
| ಪಟ್ಟಿಗುಂಡು(ಗುಂಡಿನ ಒಂದು ವಿಧ) | ಮೇಲ್ಗುಂಡು(ಗುಂಡಿನ ಒಂದು ವಿಧ) |
| ಸಣ್ಣುಂಡು(ಗುಂಡಿನ ಒಂದು ವಿಧ) | ಗೆಜ್ಜೆ ಅಡ್ಡಿಕೆ(ಗುಂಡಿನ ಒಂದು ವಿಧ) |
| ಗೌರಿಕಣ್ಣು(ತಾಳಿಸರದಲ್ಲಿರುವ ಒಂದು ವಸ್ತು) | ಚಳರಿಗೆ |

ಮಾಂಗಲ್ಯಚೈನು: ಕರಿಮಣಿಗಳಿಂದ ಪೋಣಿಸಿ ಸಿದ್ದಪಡಿಸಿದ ಚೈನು.

ಗುಂಡಿನ ಟಿಕ್ಕಿ: ಬಂಗಾರದ ಗುಂಡುಗಳಿಂದ ಕೂಡಿದ ಒಂದು ಬಗೆಯ ಆಭರಣ.

ಗೆಜ್ಜೆ ಟಿಕ್ಕಿ: ಗೆಜ್ಜೆಗಳಿಂದ ಕೂಡಿದ ಒಂದು ಬಗೆಯ ಆಭರಣ.

ಜೀರಮಣಿ ಟಿಕ್ಕಿ: ಚಿಕ್ಕಗಾತ್ರದ ಮಣಿಗಳಿಂದ ಪೋಣಿಸಿ ಮಾಡಿದ ಆಭರಣ.

ವಜ್ರಿಟಿಕ್ಕಿ: ಸಂಪೂರ್ಣ ಬಂಗಾರದಿಂದ ಮಾಡಿದ ಆಭರಣ.

ಸುರಳಿಟಿಕ್ಕಿ: ಸರುಳಿ ಆಕಾರವಾಗಿರು ಒಂದು ಬಗೆಯ ಆಭರಣ.

ಎರಡ್ತಾಳಿ: ಬಿಲ್ಲೆಯಾಕಾರದ ಎರಡು ಬಂಗಾರದ ಪದಕಗಳಿಂದ ಮಾಡಿದ ಆಭರಣ.

ಒಂಟಿತಾಳಿ : ಒಂದೇ ಬಿಲ್ಲೆ ಪದಕ ಹೊಂದಿರುವ ತಾಳಿ

ಜೋಡಿತಾಳಿ : ಎರಡು ಬಿಲ್ಲೆ ಪದಕ ಹೊಂದಿರುವ ತಾಳಿ

ದಾರತಾಳಿ : ದಾರಕ್ಕೆ ಹರಿಶಿಣ ಹಚ್ಚಿ ಹರಿಶಿಣ ಕೊಂಬು ಕಟ್ಟಿ ಸಿದ್ದಪಡಿಸಿದ ತಾಳಿ

ಬಟ್ಲುತಾಳಿ: ಬಟ್ಟಲಿನಾಕಾರದಿಂದ ಕೂಡಿದ ಆಭರಣ.

ಲಕ್ಷ್ಮೀತಾಳಿ : ಪದಕದಲ್ಲಿ ಲಕ್ಷ್ಮೀ ಪ್ರತಿಮೆ ಹೊಂದಿರುವ ತಾಳಿ

ಸಾದಾತಾಳಿ: ಬರಿ ಕರಿಮಣಿಗಳಿಂದ ಪೋಣಿಸಿದ ಆಭರಣ.

ಸಿಂಪಿತಾಳಿ: ಕಪ್ಪೆಚಿಪ್ಪಿನಾಕಾರದಲ್ಲಿ ಕೂಡಿದ ಸರ.

ಹರಳಿನ ತಾಳಿ: ವಿವಿಧ ಆರಳುಗಳಿಂದ ಕೂಡಿದ ಸರ.

ತಾಳಿಸ್ವಾಮಾನಿ: (ಕುತ್ತಿಗೆಯ ಆಭರಣ ವಿವಾಹಿತ ಮಹಿಳೆಯರು ಮಾತ್ರ ಧರಿಸುತ್ತಾರೆ)

ದಾರುಳು(ತಾಳಿಸರದ ಒಂದು ಪದಕ)

ನರಸಿಂಹ(ತಾಳಿ ಸಾಮಾನಿನಲ್ಲಿರುವ ಒಂದು ಪದಕ)

ನಾಗರ(ನಾಗು ತಲೆಯಲ್ಲಿ, ಕೊರಳ ಸರದಲ್ಲಿ ಧರಿಸುವ ಒಂದು ಆಭರಣ)

ಬಂಗಾರದ ಪದ್ಕ : ಬಂಗಾರದಿಂದ ತಯಾರಿಸಿದ ಪದಕ.

ನಾಗರೆಡೆ ಪದ್ಕ: ನಾಗರಹಾವಿನ ಎಡೆಯಂತೆ ಕೂಡಿದ ಪದಕ.

ಶಂಕು ಪದ್ಕ: ಶಂಕ ಆಕಾರದಿಂದ ಕೂಡಿದ ಪದಕ.

ಹೂವಿನ ಪದ್ಕ: ಹೂವಿನ ಆಕಾರವುಳ್ಳ ಪದಕ.

ರತ್ನಮಾಲೆ: ರತ್ನಗಳಿಂದ ಕೂಡಿದ ಹಾರ.

ಹಾಗಲಕಾಯಿ: ತಾಳಿಸರದಲ್ಲಿರುವ ಪದಕದ ಒಂದು ಬಗೆ

ದೊಡ್ಡಗುಂಡು(ನಾ): ಬಂಗಾರದಿಂದ ಕೂಡಿದ ಗುಂಡುಗಳು.

ತ್ರೀಶೂಲ ಹಾರ: ತ್ರಿಶೂಲ ಆಕಾರದಲ್ಲಿರುವ ಹಾರ.

ಕಮಲ ಹಾರ: ಕಮಲದ ಹೂವಿನ ಆಕಾರದಲ್ಲಿರುವ ಹಾರ.

ಚಂದ್ರ ಹಾರ: ಅದ್ರ ಚಂದ್ರಾಕೃತಿಯಲ್ಲಿರುವ ಹಾರ.

ಸೂರ್ಯ ಹಾರ: ಸೂರ್ಯನಂತೆ ರೂಪವುಳ್ಳ ಹಾರ.

ನಕ್ಷತ್ರ ಹಾರ: ನಕ್ಷತ್ರದಾಕಾರದಲ್ಲಿ ಸಿದ್ದಪಡಿಸಿದ ಹಾರ.

ನವರತ್ನ ಹಾರ: ಒಂಬತ್ತು ರತ್ನಗಳಿಂದ ಕೂಡಿದ ಹಾರ.

ಪುಲಿಯುಗುರು: ಹುಲಿಯ ಉಗುರನ್ನು ಹಾರದಲ್ಲಿ ಪೋಣಿಸಿ ಮಾಡಿದ ಸರ.

ಚೈನ್: ಬಂಗಾರದಿಂದ ಕೂಡಿದ ಸರ.

ವಜ್ರದ ಪದಕ: ವಜ್ರಗಳಿಂದ ಕೂಡಿದ ಪದಕ.

ಪದಕದ ಹಾರ: ಬಂಗಾರದ ಪದಕಗಳಿಂದ ಕೂಡಿದ ಹಾರ.

ಕೃಷ್ಣ ಪದಕ: ಕೃಷ್ಣನ ಚಿತ್ರಗಳುಳ್ಳ ಪದಕ.

ವಜ್ರದ ಹಾರ: ವಜ್ರಗಳಿಂದ ಮಾಡಿದ ಹಾರ.

ಗೆಜ್ಜೆ ಪದಕ: ಗೆಜ್ಜೆಗಳಿಂದ ಮಾಡಿದ ಪದಕ.

ದೀಪದ ಹಾರ: ದೀಪದಾಕೃತಿಯಲ್ಲಿ ಪದಗಳನ್ನು ಮಾಡಿ ಸಿದ್ದಪಡಿಸಿದ ಹಾರ.

ಲಕ್ಷ್ಮೀ ಹಾರ: ಲಕ್ಷ್ಮೀ ಆಕೃತಿಯನ್ನು ಹೊಂದಿರುವ ಹಾರ.

ಜೋಡಿಹಂಸ: ಎರಡು ಹಂಸಪಕ್ಷಿಗಳನ್ನು ಸೇರಿಸಿ ಮಾಡಿದ ಹಾರ

ಐದೆಳೆ ಮುತ್ತಿನ ಹಾರ: ಐದು ಎಳೆಗಳಲ್ಲಿ ಮುತ್ತುಗಳನ್ನು ಪೋಣಿಸಿ ಮಾಡಿದ ಹಾರ.

ಎಲೆ ಕಾಯಿ ಹೂವಿನ ಹಾರ/ಮಿಶ್ರಹಾರ: ವಿವಿಧ ಆಕಾರಗಳಿಂದ ಕೂಡಿದ ಹಾರ.

ಏಳು ಗುಂಡಿನ ಹಾರ: ಏಳು ಬಂಗಾರದ ಗುಂಡುಗಳನ್ನು ಪೋಣಿಸಿ ಮಾಡಿದ ಹಾರ.

ಕೊರಳ ಪಟ್ಟಿ: ಬಂಗಾರದಿಂದ ಮಾಡಿದ ಕೊರಳ ಪದಕ.

| | |
|---|---|
| ಲಿಂಗತಾಳಿ | ಚಿಂತಾಕು |
| ಅಡ್ಡಿಕೆ ಮಣಿ | ಬ್ಯಾಳಿಮಣಿ |
| ಬಂದಿ | ಕಂಠಮಾಲೆ |
| ಮಣಿ ಪದಕ | ನೇವಳ |
| ಪುಸ್ತಿ | ಮುಕ್ತಾವಳಿ |
| ಕಪ್ಪುರದ ಕಂಠಿಕೆ | ಮುತ್ತಿನ ಲಂಬಳ |
| ಕಟ್ಯಾಳು | ಲಾಡಿ |
| ಅಸಲಿ | ತಾಯತ |
| ಮುತ್ತಿನ ಕಂಠಿ | ತನಮಣಿ |
| ಅರಳೆಲೆ(ಮಾಗಾಯಿ) | ಕೆಂಪು ಬಿಳಿ ಹರಳಿನ ನೆಕ್ಲೇಸ್ |
| ಚಿನ್ನದ ಕುತ್ತಿಗೆ ಪಟ್ಟಿ | ಗೆಜ್ಜೆ ನೆಕ್ಲೇಸ್ |
| ಚಿನ್ನದ ಹಾರ | ಕರಿಮಣಿ ಟೀಕಿ |
| ಕೆಂಪು ಹಲಗೆ ವಜ್ರ ಮುತ್ತಿನ ಪದಕ | ಸರಗಿ ಬಂದಿ |

**ಕಾಲುಬೆರಳ ಆಭರಣಗಳು**

ಕಾಲುಂಗುರ: ಮುತ್ತೈದೆಯರು ಕಾಲಿನ ಬೆರಳಿಗೆ ಧರಿಸುವ ಬೆಳ್ಳಿಯುಂಗರ.

ಸುತ್ತು ಕಾಲುಂಗುರ: ಮೂರ ಅಥವಾ ನಾಲ್ಕು ಸುತ್ತುಗಳಿಂದ ಕೂಡಿದ ಬೆಳ್ಳಿ ಕಾಲುಂಗುರ.

ಸುರಳಿ ಕಾಲುಂಗುರ: ಸುತ್ತು ಕಾಲುಂಗುರದ ಒಂದು ವಿಧ.

ಗೆಜ್ಜೆ ಉಂಗುರ: ಗೆಜ್ಜೆಗಳನ್ನು ಹೊಂದಿರುವ ಕಾಲುಂಗುರ.

ಪಿಲ್ಲಿ: ಕಾಲ್ಬೆರಳಿಗೆ ಹಾಕುವ ಕಾಲುಂಗುರ.

ಉಳ್ಳಾಗಡ್ಡಿ ಹೂವಿನ ಪಿಲ್ಲಿ: ಉಳ್ಳಾಗಡ್ಡೆ ಹೂವಿನ ಆಕಾರದಲ್ಲಿರುವ ಕಾಲುಂಗುರ.

ಗುಳ್ಳಿ ಪಿಲ್ಲೆ

ನೆಲ್ಲಿಕಾಲುಂಗುರ

ಮಿಂಚು

ಸಾದಾ ಮೀನ

ವಾರಿ ಮೀನ

ಬೆರಳುಗುರು

ಸಾದಾ ಸುರುಳಿ

ವಾರಮೀನ

ಹೊಸುರುಳಿ

ಕಳಸದ ಪಿಲ್ಲಿ

ಅಣ್ಬಟ್ಟು

ಜುಡ್ವೆ

ಕಡ್ಡಿಪಿಲ್ಲೆ

ಕಳವಾರಪಿಲ್ಲೆ

ಕಾಲ್ಬಿಲ್ಲಿ

ಗೆಜ್ಜೆಪಿಲ್ಲಿ

ಬಾಳಿಪಿಲ್ಲಿ

ಸುರುಳಿ ಪಿಲ್ಲೆ

**ಕಾಲಿಗೆ ಧರಿಸುವ ಆಭರಣಗಳು**

ನೂಪುರ

ಅಂದುಗೆ

ನೇಮರ

ತೋಡೆ

ಫೈಝಣ

ಕಾಲು ಕಡಗ

ಕಾಲರುಳಿ

ಉರುಳಿ

ಕಾಲ ಸರ್ಪಳಿ

ಗೆಜ್ಜೆ ಸರ

| | |
|---|---|
| ಹುರಗೆಜ್ಜೆ | ಚೈನು |
| ಕಾಲೊಂದ್ಗಿ | ಗೆಜ್ಜೆ ಪಾಡಗ |
| ಗೊಬ್ಬಿಕಾಯಿ | ಸುರಳಿಚೈನು |
| ರುಳಿ | ಕಾಲ್ಬುರಿ(ಬೆಳ್ಳಿಯ ಗಟ್ಟಿಯಾದ ಬಳೆ) |
| ಕಾಲ್ಗಡಗಗಳು/ಕಾಲ್‌ಚೈನುಗಳು | ಬಿಡಿ ಮಾವಿನಕಾಯಿ ಚೈನು |
| ಬಿಲೇಬಿ/ದಾರ ಚೈನು | ಸಾದಾ ಚೈನು |
| ಗೆಜ್ಜೆ ಚೈನು | ಬೆಳ್ಳಿಯ ನೂಪೂರ |
| ಬೆಳ್ಳಿಕೊಡೇವು | |

**ಕಿವಿಯಲ್ಲಿ ಧರಿಸುವ ಆಭರಣಗಳು**

ನವರತ್ನದೋಲೆ: ಒಂಬತ್ತು ರತ್ನಗಳಿಂದ ಕೂಡಿದ ಓಲೆ.

ಶಂಖದೋಲೆ: ಶಂಖಾಕೃತಿಯಲ್ಲಿ ಇರುವ ಓಲೆ.

ದಂತದೋಲೆ: ಆನೆ ದಂತದಿಂದ ಮಾಡಿದ ಓಲೆ.

ಕೇದಿಗೆಯೋಲೆ: ಕೇದಿಗೆ ಹೂವಿನ ಆಕಾರದಲ್ಲಿರುವ ಓಲೆ.

ದ್ರಾಕ್ಷಿಬಳ್ಳಿ: ದ್ರಾಕ್ಷಿ ಬಳ್ಳಿಯಂತೆ ಆಕಾರವುಳ್ಳ ಓಲೆ.

| | |
|---|---|
| ಬೆಂಡೋಲೆ: | ಓಲೆ(ವಾಲಿ) |
| ಬಾಮಲಿ | ತಾಲೂಕ |
| ಗುಬ್ಬಿ ಬಾವಲಿ | ಚಂದ್ರಬಾವ |
| ಕೆನ್ನೆಸರಪಳಿ | ಕರ್ಣಪೂರ |
| ಜುಮಕಿ: ಕಿವಿಯೋಲೆ | ಕೊಪ್ಪು |
| ಜೋಡು ಅರಗಿಳಿ | ಮಗಿಕುಂಡಲ |
| ರತ್ನಕುಂಡಲ | ಮುರುಪು |
| ಬುಗುಡಿ | ಅಗಸಿಕಡ್ಡಿ |

| | |
|---|---|
| ಹುಜರ | ತಾಲುಕ(ಓಲೆ) |
| ಎಂಚೆಯ | ಎಂಬೋಸು |
| ಕಂಟಿವಾಲೆ ಸರಪ್ಣಿ | ಕಟಗ |
| ಕನ್ನವಚ್ಚ | ಚಂದ್ರಕೋಲಕ್ಯಾದ್ಗಿ |
| ಗುಬ್ಬಿಬೇಳೆ | ಚಂದ್ರಬಾಳಿ |
| ಚೌಕಳಿ | ಕಿವಿಸಾಕ್ಕಿ |
| ಕಿವಿ ಚೈನು | ಜಾಲ್ರಾ: ಹರಳುಗಳಿಂದ ಮಾಡಿದ ಜಾಲ್ರಿ. |

ಅಳ್ಳಿನ ಜಾಲ್ರಾ(ಹರಳುಗಳಿಂದ ಮಾಡಿದ ಜಾಲ್ರಿ)

ಗುಂಡಿನ ಜಾಲ್ರಾ: ಹರಳುಗಳಲ್ಲಿ ಗುಂಡನ್ನು ಸೇರಿಸಿ ಮಾಡಿದ ಜಾಲ್ರಿ.

ಮುತ್ತಿನ ಜಾಲ್ರಾ: ಮುತ್ತುಗಳಲ್ಲಿ ಹರಳನ್ನು ಸೇರಿಸಿ ಮಾಡಿದ ಜಾಲ್ರಿ.

ಬುಗುಡಿ ಜುಮಕಿ: ಕಿವಿಯ ಮೇಲ್ಭಾಗದಲ್ಲಿ ಧರಿಸುವ ಆಭರಣ.

ಮುತ್ತಿನ ಬುಗುಡಿ: ಮುತ್ತುಗಳಿಂದ ಕೂಡಿದ ಕಿವಿಯ ಮೇಲ್ಭಾಗದಲ್ಲಿ ಧರಿಸುವ ಆಭರಣ.

| | |
|---|---|
| ಟಾಪ್ಸ್ | ಮುತ್ತು ಹವಳ ಟಾಪ್ಸ್ |
| ತಿಗಡಿ | ತಿಕೆ |
| ದ್ರಾಕ್ಷಿ | ಬಾವುಲಿ |
| ಕತ್ತಬಾವ್ಲಿ(ಬಾವ್ಲಿಯ ಒಂದು ವಿಧ) | ಗುಬ್ಬಿಬಾವುಲಿ |
| ಚಂದ್ರಬಾವುಲಿ | ಬುಗುಡಿ |
| ಬಾವಲಿ | ಗಳತಂಟಿನ ಬುಗುಡಿ |
| ಚೌಕಳಿ | |

**ವಿವಿಧ ನಮೂನೆಯ ಓಲೆಗಳು**

ನವಿಲಿನ ಓಲೆ: ನವಿಲಿನ ಆಕಾರವನ್ನು ಹೊಂದಿರುವ ಓಲೆ.

ಚಿತ್ತಾರದ ಓಲೆ: ರಂಗೋಲಿ ಆಕಾರವನ್ನು ಹೊಂದಿರುವ ಓಲೆ.

ಜೋಡಿಮೀನಿನ ಓಲೆ: ಎರಡು ಮೀನುಗಳ ಆಕಾರವನ್ನು ಹೊಂದಿರುವ ಓಲೆ.

ಮೀನಿನ ಓಲೆ: ಮೀನಿನ ಆಕಾರ ಹೊಂದಿರುವ ಓಲೆ.

ದೀಪದ ಓಲೆ: ದೀಪಾಕೃತಿಯುಳ್ಳ ಓಲೆ.

ಹೂವಿನ ಓಲೆ: ಹೂವ್ವಿನಾಕೃತಿ ಹೊಂದಿರುವ ಓಲೆ.

ಹಂಸದ ಓಲೆ: ಹಂಸಪಕ್ಷಿಯ ಆಕಾರ ಹೊಂದಿರುವ ಓಲೆ.

ಬಿಳಿ ಮತ್ತು ಕೆಂಪು ಹರಳಿನ ಓಲೆ: ಬಿಳಿ ಮತ್ತು ಕೆಂಪು ಹರಳು ಹೊಂದಿರುವ ಓಲೆ.

ಲಕ್ಷ್ಮೀ ಓಲೆ: ಲಕ್ಷ್ಮೀ ಮೂರ್ತಿ ಆಕೃತಿ ಹೊಂದಿರುವ ಓಲೆ.

ಅಡ್ಡಿಕೆ ಓಲೆ: ಅರ್ಧಚಂದ್ರಾಕಾರದ ಓಲೆ.

ನಕ್ಷತ್ರದ ಮುತ್ತಿನ ಓಲೆ: ನಕ್ಷತ್ರ ಹಾಗೂ ಮುತ್ತನ್ನು ಜೋಡಿಸಿ ಮಾಡಿದ ಓಲೆ.

ಚಂದ್ರ ನಕ್ಷತ್ರದೋಲೆ: ಚಂದ್ರಾಕೃತಿಯಲ್ಲಿದ್ದು ನಡುವೆ ನಕ್ಷತ್ರಾಕೃತಿ ಹೊಂದಿರುವ ಓಲೆ.

ಸುಮದೋಲೆ: ಹೂವಿನ ಆಕೃತಿ ಹೊಂದಿರುವ ಓಲೆ.

ಪುಷ್ಪ ಓಲೆ: ಚಿಕ್ಕ ಚಿಕ್ಕ ಹೂಗಳಾಕೃತಿಗಳಿಂದ ಕೂಡಿದ ಓಲೆ.

ಚಿನ್ನದ ಗುಂಡಿನ ಓಲೆ: ಬಂಗಾರದ ಗುಂಡುಗಳಿಂದ ಕೂಡಿದ ಓಲೆ.

ವಿಭಿನ್ನ ಶೈಲಿ ಓಲೆ: ವಿವಿಧ ಆಕೃತಿಗಳಿಂದ ಕೂಡಿದ ಓಲೆ.

**ಓಲೆಗಳೊಂದಿಗೆ ಧರಿಸುವ ವಿವಿಧ ರೀತಿಯ ಜುಮುಕಿಗಳು, ಲೋಲಾಕುಗಳು ಮತ್ತು ರಿಂಗುಗಳು**

ಹರಳಿನ ಜುಮುಕಿ: ಹರಳುಗಳಿಂದ ಕೂಡಿದ ಜುಮುಕಿ.

ಚಿಕ್ಕ ಜುಮುಕಿ: ಸಣ್ಣ ಆಕಾರದಲ್ಲಿರುವ ಜುಮುಕಿ.

ಸಾದಾ ಜುಮುಕಿ: ಸಾಮಾನ್ಯ ಮಾದರಿಯ ಜುಮುಕಿ.

ಚಿತ್ತಾರ ಜುಮುಕಿ: ರಂಗೋಲಿ ಆಕಾರದಿಂದ ಕೂಡಿದ ಜುಮುಕಿ.

ಗೆಜ್ಜೆ ಜುಮುಕಿ: ಗೆಜ್ಜೆಗಳನ್ನು ಪೋಣಿಸಿ ಮಾಡಿದ ಆಭರಣ.

ಹವಳದ ಜುಮುಕಿ: ಹವಳದಿಂದ ಕೂಡಿದ ಆಭರಣ.

ಮುತ್ತಿನ ಜುಮುಕಿ: ಮುತ್ತುಗಳಿಂದ ಕೂಡಿದ ಆಭರಣ.

ಗಂಟೆಶೈಲಿ ಜುಮುಕಿ: ಗಂಟೆಯಾಕೃತಿಯಲ್ಲಿರುವ ಆಭರಣ.

ಲೋಲಾಕು:

ಎರಡೆಳೆ ಗುಂಡು: ಗುಂಡುಗಳಿಂದ ಕೂಡಿದ ಆಭರಣ.

ಬಣ್ಣದರಳಿನ ಜುಮುಕಿ: ವಿವಿಧ ಬಣ್ಣದ ಅರಳುಗಳಿಂದ ಕೂಡಿದ ಆಭರಣ.

**ಕಿವಿಯಲ್ಲಿ ಧರಿಸುವ ಆಭರಣಗಳು**

ಬುಗಿಡಿಕಡ್ಡಿ: ಕಿವಿಯ ಮೇಲ್ಭಾಗದಲ್ಲಿ ಧರಿಸುವ ಆಭರಣ.

ಬೆಂಡೋಲೆ: ಕಿವಿಯಲ್ಲಿ ಧರಿಸುವ ಆಭರಣ.

ಏಳರಳಿನ ಬೆಂಡೋಲಿ: ವಿವಿಧ ಬಗೆಯ ಏಳು ಅರಳುಗಳಿಂದ ಕೂಡಿದ ಆಭರಣ.

ಮುತ್ತಿನ ಬೆಂಡೋಲಿ: ಮುತ್ತುಗಳಿಂದ ಕೂಡಿದ ಆಭರಣ.

ಲಡ್ಡು ಬೆಂಡಾಲಿ: ದುಂಡಾಗಿರುವ ಒಂದು ಬಗೆಯ ಆಭರಣ.

ಕೆತ್ತನೆಯ ಓಲೆ: ವಿವಿಧ ಮಾದರಿ ಕೆತ್ತನೆಗಳಿಂದ ಕೂಡಿದ ಆಭರಣ.

ಗುಂಡಿವಾಲೆ: ದುಂಡಾಗಿರುವ ಒಂದು ವಿಧದ ಆಭರಣ.

ಬಾದಾಮಿ ಹೂವು: ಬಾದಾಮಿ ಹೂವಿನ ಆಕೃತಿಯನ್ನು ಹೊಂದಿದ ಆಭರಣ.

ಮುಲಾವಲು(ನಾ) (ಕಿವಿಯ ಮೇಲು ಭಾಗದಲ್ಲಿ ಧರಿಸುವ ಆಭರಣ)

ಬುರುಗೆಚೆಟ್ಟು

ಗೋಲ್‌ಬೈರು

ಹಿಪುಗಿಮಾಬ್ ಬೈರ್

ಮಾಟೀಲ

ಮೇಟಿ ಕೊಳವೆ

ಅಕ್ಕಿವೋಲೆ

ಗೋಧಿಮಣಿಹೂವು:

ಚಂದ್ರಬಾವ

ಸಾದಾ ಬೆಂಡೋಲಿ:

ಚಿಕ್ಕಬೈರು

ಮಾಟಿ

ಸಾದಾ ಮಾಟೀಲು

ವಾರುಮಿನಾ(ಪಿಲ್ಲೆಯ ಒಂದು ವಿಧ)

ಸಾದಾಮಿಂಚು:

ಗುಬ್ಬಬಾವಲಿ

ಕೆನ್ನೆಸರಪಳಿ

| | |
|---|---|
| ಕರ್ಣಪೂರ | ಜೋಡು ಅರಗಿಳಿ |
| ಮಗಿ ಕುಂಡಲಿ | ರತ್ನ ಕುಂಡಲಿ |
| ಮುರುಪು | ರಿಂಗ |

**ಕೈ ಬೆರಳುಗಳಿಗೆ ಧರಿಸುವ ಆಭರಣಗಳು**

ಉಂಗುರ: ಬಂಗಾರದಿಂದ ಸಿದ್ಧಪಡಿಸಿದ ದುಂಡನೆಯ ಆಭರಣ

ವಜ್ರದುಂಗುರ: ವಜ್ರದರಳನ್ನು ಪೋಣಿಸಿ ಮಾಡಿದ ಆಭರಣ.

ನೀಲದುಂಗುರ: ನೀಲಿ ಬಣ್ಣದ ಅರಳನ್ನು ಸೇರಿಸಿ ಮಾಡಿದ ಆಭರಣ.

ನವರತ್ನದುಂಗುರ: ಒಂಬತ್ತು ರತ್ನಗಳಿಂದ ಕೂಡಿದ ಆಭರಣ.

ಹರಳಿನ ಉಂಗುರ: ಹರಳುಗಳಿಂದ ಕೂಡಿದ ಆಭರಣ.

ಹವಳದುಂಗುರ: ಹವಳಗಳಿಂದ ಕೂಡಿದ ಆಭರಣ.

ಮುದ್ರೆಯುಂಗುರ: ನಿರ್ಧಿಷ್ಟ ಮುದ್ರೆಯನ್ನು ಒತ್ತಿ ಮಾಡಿದ ಆಭರಣ.

ನಾಗ ಉಂಗುರ: ನಾಗರಹಾವಿನ ಆಕಾರ ಇರುವ ಆಭರಣ.

ಸುತ್ತು ಉಂಗುರ: ಸುರಳಿಯಾಕಾರದ ಆಭರಣ.

ಗೆಜ್ಜೆ ಉಂಗುರ: ಗೆಜ್ಜೆಗಳನ್ನು ಇಟ್ಟು ಮಾಡಿದ ಆಭರಣ.

ಕೆತ್ತಿದುಂಗುರ: ವಿವಿಧ ಆಕೃತಿಗಳನ್ನು ಕೆತ್ತಿ ಸಿದ್ದಪಡಿಸಿದ ಆಭರಣ.

ಮಾಣಿಕದುಂಗುರ: ಮಾಣಿಕ್ಯವನ್ನು ಸೇರಿಸಿ ಮಾಡಿದ ಆಭರಣ.

ಚೌಕೋನಾಕೃತಿ ಉಂಗುರ: ನಾಲ್ಕು ಮೂಲೆ ಆಕೃತಿಯುಳ್ಳ ಆಭರಣ.

ವಂಕಿ ಉಂಗುರ: 'V' ಆಕಾರದಲ್ಲಿರುವ ಆಭರಣ

| | |
|---|---|
| ತೊಂಡಿಯುಂಗುರ | ಬದಾಮದ ಉಂಗುರ |
| ಸಿಕೇದುಂಗುರ | ಮಡಿ ಉಂಗುರ |
| ತೋರ ಮುದ್ರಿಕೆ | ಮೂರೇನ |

**ಕೈ ಕಡಗ ಆಭರಣಗಳು**

ಸಾದಾ ಕಡಗಳು | ಹಾಲ್ಮಣಿ ಕಡಗ

ಹಲ್ಗಡಗ: ಚಿಕ್ಕ ಮಕ್ಕಳಿಗೆ ಚಿಕ್ಕವರಿದ್ದಾಗ ತೊಡಿಸುವ ದುಂಡನೆ ಆಭರಣ.

ಜಕ್ಣಿಕಡ್ಗ | ಬ್ರೆಸ್‌ಲೈಟ್ ಚೈನು

**ಮುಂಗೈ ಬಳೆ ಮತ್ತು ಕಡಗ**

**ಬಳೆಗಳ ವೈಖರಿ**

ಬಂಗಾರದ ಬಳೆ: ಬಂಗಾರದಿಂದ ಮಾಡಿದ ಆಭರಣ.

ಹೂವಿನ ಬಳೆ: ಹೂವಿನ ಆಕಾರಉಳ್ಳ ಆಭರಣ.

ಕುಸುರಿ ಬಳೆ: ವಿವಿಧ ಬಗೆಯ ಆಕೃತಿಗಳ ಕೆತ್ತನೆಯಿಂದ ಕೂಡಿದ ಆಭರಣ.

ಹರಳಿನ ಬಳೆ: ಹರಳನ್ನು ಸೇರಿಸಿ ಮಾಡಿದ ಆಭರಣ.

ಗುಂಡಿನ ಬಳೆ: ದುಂಡನೆಯ ಆಕೃತಿಗಳಿಂದ ಸಿದ್ದಪಡಿಸಿದ ಆಭರಣ.

ದಂತದ ಬಳೆ: ಆನೆಯ ದಂತಗಳಿಂದ ಮಾಡಿದ ಆಭರಣ.

| | |
|---|---|
| ಮುರುಗಿನ ಬಳೆ | ತಿರುಪಣಿ ಬಳೆ |
| ಕಂಕಣ ಬಳೆ | ಕಡಗ |
| ಸಾದಾ ಕಡಗ | ಗೋಟು |
| ಪಾಟ್ಲಿ | ಮುರಿಗಿ ಬಳೆ |
| ನೀರಗಿ ಬಳೆ | ಕಂಕಣ |
| ಮುಳ್ಳು ಕಂಕಣ | ಕೈ ತೊಡೇವು |
| ಪೋಳ್ತೊದೆ | ಕೀಲು ಕಂಕಣ |
| ಪಸುರ್ಗಕಂಕಣ | ಕಡಗ ಕಂಕಣ |
| ಸಿಂಹದ ಮುಖದ ಕಂಕಣ | ಜೋಡು ಕಂಕಣ |
| ಗೋಟು | ಕಮಲ ದೊರೆ |

ಜೋಡು ದುಂಡು
ಗುಂಡು

ಬಿಂಧ್ಲಿ
ಬಿಲ್ವಾರ

ಖಡೆ
ಕೈ ಕಟ್ಟು

ಉಂಗುರ ಸರಪಳಿ
ಗೋಟ್

ಅನಾರಿಕಲಿತೋಡೆ
ಐಸ್‌ಕ್ರೀಂತೋಡೆ

**ಕೈ ಆಭರಣಗಳು**

ನುಲ್ಗೆಕಪ್ರ
ವಾಕು

ಕಾಪು

**ತೋಳ್ಬಂದಿಗಳು**

ತೋಳುಬಂದಿ
ಜಾಲರಿ ತೋಳು ಬಂದಿ

ಸಾದಾ ವಂಕಿ
ಹರಳಿನ ವಂಕಿ

ನಾಗ ಮುರುಗಿ
ತೋಳ್ಬಳೆ

ಪದಕ ತೋಳ್ಬಂದಿ
ಬಾಜು ಬಂದ

ತೋಳ ಬಂದ
ತೋಳ ಬಾಪುರಿ

ಉಲಿವ ಬಾಹುಲಿ
ರಟ್ಟೆ ಬಳೆ

ಕೇಯೂರ
ಭುಜದ ಬಂದ

ಭುಜ ಕೀರ್ತಿ
ಬಾಹುಪೂರ

ಬಂದಿ
ಮುರಡಿ ಸರ್ಪಳಿ

ಒಂಟಿ
ವಂಕಿ ತೋಳ್ಬಂದಿಗೆ

ತೋಳ್ಸರಗಿ
ದೊಂಕ್ಬಂದಿ

ರಟ್ಗಡೆ

ಮುಡಿಬಳೇನಾ(ತೋಳಿಗೆ ಕಟ್ಟಿಕೊಳ್ಳಲು ಮಂತ್ರಿಸಿಕೊಟ್ಟ ತಾಮ್ರದ ಬಳೆ)

**ನಾಸಿಕಾಭರಣಗಳು**

ರಿಂಗು
ಚಂದ್ರ
ಚಕ್ರ
ಹೂವು
ತೆನಿ
ಬಿನ್ನ
ಗೂಟ
ನತ್ತು
ಅರಚಂದ್ರ
ಮೀನ
ನಾಗನತ್ತು
ಹರಳಿನ ನತ್ತು
ಕುಂಭ
ಹರಳು
ಅರೆ ಚಂದ್ರ ಮೂಗು ಬಟ್ಟು
ಬೀಸರಿ
ಅರ್ಧ ಚಂದ್ರಾಕಾರದ ಬುಲಾಕು
ಮುತ್ತಿನ ಜೋಳ
ನೋಜರಿಂಗ್
ಅರ್ಚಂದ್ರ ಮೂಗ್ಬಟ್ಟು(ಮೂಗು ಬಟ್ಟಿನ ಒಂದು ವಿಧ)
ಮೂಗ್ತಿ

ಬುಲಾಕು
ಲವಂಗದ ಮೊಗ್ಗು
ನಕ್ಷತ್ರ
ನವಿಲು
ಎಲೆ
ದೊಡ್ಡರಳು
ಗುಂಡಿನ ನತ್ತು
ಮುತ್ತಿನ ನತ್ತು
ವಜ್ರ
ಗಾಡೆ
ರಿಂಗ್ ಮೂಗು ಬಟ್ಟು
ಗೂಟ ಮೂಗುತಿ
ವಂಕಿ
ತೆನಿ ಮೂಗು ಬಟ್ಟು
ಸುರುಳಿ ಮುತ್ತಿನ ನತ್ತು
ಹೂ ಬುಲಾಕು
ರತ್ನದ ಬೊಟ್ಟು
ಘೋಣಾಂಕುಶ
ಬೇಸ್ರಿ
ಯಲಿ ಮೂಗ್ಬಟ್ಟು
ಗೋಟು ಮೂಗುತಿ

ತಿರುಣಿ ಮೂಗುತಿ

ಮುತ್ತಿನ ಮೂಗುತಿ

ಹರಳಿನ ಮೂಗುತಿ

ಸೋಲೆ

ಶ್ರೀದೇವಿ (ಮೂಗುಬಟ್ಟಿನ ಒಂದು ವಿಧ)

**ಕೆನ್ನೆಸರ/ಮಾಟಿಗಳು**

ಬಳ್ಳಿ ಮಾಟಿ

ಎಲೆ ಮಾಟಿ

ಪಟ್ಟಿ ಮಾಟಿ

ಗೀರು ಮಾಟಿ

ಹರಳು ಗುಂಡಿನ ಮಾಟಿ

ಜಹಾಂಗೀರ್ ಶೈಲಿ

ಹರಳಿನ ಶೈಲಿ

ಚಿನ್ನದ ಗೀರು

ಹೂಮಗುಂಡು

ಬಿಳಿ ಹರಳಿನ ಮಾಟಿ

ಮುತ್ತು ಕೆಂಪು ಹರಳಿನ ಮಾಟಿ

**ಸೊಂಟದ ಆಭರಣಗಳು–ಡಾಬುಗಳು**

ಸಾದಾ ಪಟ್ಟಿ

ಗುಂಡಿನ ಪಟ್ಟಿ

ಗೆಜ್ಜೆ ಪಟ್ಟಿ

ಕಟಿಸೂತ್ರ

ಕಟ ಬಂಧ

ಮೇಖಲಾ

ಕಾಂಚೀಧಾಮ

ಚಿನ್ನದ ಕೊಂಡಿ

ಸಿಕ್ಕೇದ ಡಾಬು

ಗೋಡಂಬಿ ಚೈನು

ಗುಂಡಿನ ಚೈನು

ಹೊನ್ನಿನ ಡಾಬು

ವಜ್ರ ಕಟ್ಟಿದ ಡಾಬು

ರನ್ನ ಬಲೆಯ ಉಡಿದಾರ

ರಶನಾ(ರಾಸಣ)

ಒಡ್ಯಾಣ

ಕಾಲ್ನೂಪುರ

ಕಾಕಸ್ಯಾ

ಬಂಗಾರದ ಕಿರುಗಂಟೆ

ಹೊನ್ನ ಗಂಟೆ ಸರ

ಚಳಕಿ

ಸಾದಾಡಾಬು

ಗೆಜ್ಜೆ ಡಾಬು
ಲಕ್ಷ್ಮೀ ಡಾಬು

ತಿರುಪಿನ ಡಾಬು
ಒಡ್ಯಾಣ ಶೈಲಿಯ ಡಾಬು

ಸರಪಳಿ ಪಟ್ಟಿ
ಪಟಾಪಟಿ ಡಾಬು

ಪಟಾಪಟಿ ಒಡ್ಯಾಣ
ಮಾವಿನ ಕಾಯಿ ಒಡ್ಯಾಣ

ಡಾಬು
ಕೊಂಡಿ ಡಾಬು

ಗೆಜ್ಜೆ ಡಾಬು
ನಡಪಟ್ಟಿ

**ಬೈತಲೆ ಬೊಟ್ಟುಗಳು**

ಸೀಮಂತ ಮಣಿ
ಮುಂತಲೆಯ ಆಭರಣಗಳು

ಬೈತಲೆ ಪದಕ
ಬೇತ್ಲಮಣಿ

**ತಲೆಯ ಆಭರಣಗಳು**

ಜುಲಪಿ ಹೂವು
ರಜಾದುವ್ವ

ರೋಜಾದುವು
ಹರಳಿನ ಹೂವು

ಗುಬ್ಬಿ

**ಹಿಂತಲೆಯ ಜಡೆಯ ಆಭರಣಗಳು**

ಜಡೆಗೊಂಡೆ
ಜಡೆ ನಾಗರ

ಕ್ಯಾದಿಗೆ
ಅಡ್ಡ ಕ್ಯಾದಿಗೆ

ಕೃಷ್ಣ ಪದಕ
ಮೊಗ್ಗಿನ ದಂಡೆ

ತಿರುಪಣಿ ಹೂ
ಜಡೆಬಿಲ್ಲೆ

ಜೋಡಿಗಿಳಿ ಹೆರಳು
ಜಡೆ ಬಂಗಾರ

ಕುಚ್ಚು
ಚಾಲಿಕುಪ್ಪೆ

ಜಡೆಗಂಡೇವು
ರೆಟ್ನೆ

ಕೇದಿಗೆ ಹೂ
ಕೇದಿಗೆ ಗರಿ

| | |
|---|---|
| ಚಂದ್ರಕೋಲು | ಜೋಡುಗಿಳಿ |
| ಮೊಗ್ಗಿ ಅರಳಿ | ಗುಲಾಬಿ ಹೂ |
| ನಾಗರ | ಹರಳು |
| ಬೈತಲೆ ಮಣಿ | ಸಿಂಪಣಿ |
| ಚೌಕಳಿ | ಗೊಂಡೆ |
| ಜರದಗೊಂಡೆ | ಪೆಂಡೆ |

**ಪುರುಷರು ಧರಿಸುವ ಕೈ ಬೆರಳಿನ ಆಭರಣಗಳು**

| | |
|---|---|
| ಕೊಳವೆ ಉಂಗುರ | ಕಡಗದುಂಗುರ |
| ನವರತ್ನದುಂಗುರ | ಗುಂಡುಸರ |
| ಗೇರುಂಗುರ | ಮುದ್ರೆಯುಂಗುರ |
| ಚಂದ್ರದುಂಗುರ | ಚಿಕ್ಕರಳಿನ ಉಂಗುರ |
| ಹೂವಿನುಂಗುರ | ಕನ್ನಡಿಯುಂಗುರ |
| ನಾಗ ಉಂಗುರ | ಮಜ್ರದುಂಗುರ |
| ವೀಣೆಯುಂಗುರ | ಹಣ್ಣಿನುಂಗುರ |
| ಕಳಾವರದುಂಗುರ | ಸಾದಾ ಉಂಗುರ |
| ವಂಕಿ ಉಂಗುರ | ಆನೆಯುಂಗುರ |
| ಶಿವನ ಕಣ್ಣು | ಹಸ್ತದುಂಗುರ |
| ಹರಳಿನುಂಗುರ | ಬಳೆಯುಂಗುರ |
| ಚಿನ್ನದುಂಗುರ | ವಜ್ರದುಂಗುರ |
| ಧಾನ್ಯದುಂಗುರ | ಹವಳದುಂಗುರ |

**ಕಾಲ್ಬೆರಳಿನ ಆಭರಣಗಳು**

| | |
|---|---|
| ರನ್‌ಜೋಡು | ಸುತ್ತಾಲುಂಗುರ |
| ವಾರಮೀನ | ಸುರುಳಿ |

| | |
|---|---|
| ಉಳ್ಳಾಗಡ್ಡೆಪಿಲ್ಲಿ | ಮಿಂಚು |
| ಕಿರಿಪಿಲ್ಲಿ | |

**ಕೈ ಆಭರಣಗಳು**

| | |
|---|---|
| ಕಪ್ಪ | ಖಡೆ |
| ಪೋಟೆ | ಕೈಮುರಿ(ಬೆಳ್ಳಿಯ ಬಳೆ) |

**ಕಿವಿ ಆಭರಣಗಳು**

| | |
|---|---|
| ಕಳವರ | ಮುರುವ, ಮುರಾವು |
| ಅಂಟು ಮುರುವು | ಕುಡಿಗೆ ಮುರುವು |
| ಚಂದ್ರ ಮುರುವು | ತಟೆ ಮುರುವು |
| ಮುತ್ತಿನ ಮುರುವು | ಮೇಟಿ ಮುರುವು |
| ಮೇಲ್ಮುರುವು | ಲಗಾಮು |
| ಬೆಂಡಾಲೆ ಲಗಾಮು | ಅತ್ತ ಕಡುಕು(ನಾ) |
| ಒಂಟೆ(ನಾ) | ಚೌಕಳಿ(ನಾ) |
| ಜಟಕುಂಡಲು(ನಾ) | ಜಾವಳಿ(ನಾ) |

**ಮಕ್ಕಳ ಕೈ ಆಭರಣ**

ಕೈಕಟ್

**ಕಾಲಿನ ಆಭರಣ**

ಹಾಲ್ಗಡ್ಗ

**ಕೊರಳಾಭರಣ**

ರಚ್ಚೆತಾಲಿ

**ಕಿವಿಯ ಆಭರಣಗಳು**

| | |
|---|---|
| ಕೊಂಡ್ಲು | ರಿಂಗ್ |

**ಮುಸ್ಲಿಂ ಮಹಿಳೆಯರು ಧರಿಸುವ ಆಭರಣಗಳು**

**ಕರ್ಣಾಭರಣಗಳು**

ಝುಮ್ಕಿ ಕೀರನ್

ಐರನ್ ಕಿರನ್ ಪಟ್ಟಿಕಾ

ಅಲ್ನತ್ ಡಾಗಬೇಲ

ಬುಗ್ಡಿ: ಚಿಕ್ಕ ಚಿಕ್ಕ ಮುತ್ತುಗಳಿಂದ ಜೋಡಿಸಿ ಕಿವಿಯ ಮೇಲ್ಭಾಗದಲ್ಲಿ ಧರಿಸುವ ಆಭರಣ.

ತಾಲೂಕು: ಕಿವಿಯ ಮೇಲ್ಭಾಗದಲ್ಲಿ ಧರಿಸುವ ಆಭರಣ.

ಮುರಿಕ್ಯಾ, ದಂಡ್ಯಾ ಮತ್ತು ಬಾವಲ್ಯ: ಕಿವಿಯ ಮೇಲ್ಭಾಗದಲ್ಲಿ ಕೆಲವರು ಒಂದಕ್ಕಿಂತ ಹೆಚ್ಚು ರಂಧ್ರ ಮಾಡಿಕೊಂಡು ಮುರಿಕ್ಯಾ, ದಂಡ್ಯಾ, ಬಾವಲ್ಯಾ ಎಂಬ ವಿಶಿಷ್ಟ ಆಭರಣಗಳನ್ನು ಧರಿಸುತ್ತಾರೆ.

ಪೂಲಾ: ಹೂವಿನ ವಿನ್ಯಾಸದಲ್ಲಿರುವ ಒಂದು ಕಿವಿಯ ಆಭರಣ.

ಜುಮಕಿ: ಇದು ಗಂಟೆಯಾಕಾರದಲ್ಲಿರುವ ಕಿವಿಗೆ ಧರಿಸುವ ಆಭರಣ.

**ಕಂಠಾಭರಣಗಳು**

ಗಲ್ಸರ್

ಲಚ್ಛಾ(ಕರಿಮಣಿಸರ): ಭಾರತೀಯ ಮುಸ್ಲಿಂರು ಮುತ್ತೈದೆಯ ಸಂಕೇತವಾಗಿ ಕೊರಳಲ್ಲಿ ಈ ಆಭರಣವನ್ನು ಧರಿಸುತ್ತಾರೆ.

ಕಿರಾಚಿಹಾಲ್ ನೆಕ್ಲೇಸ್

ಬೆಖಾರಾರಿ ಪಟ್ಟಿ ಪೂಲ್‌ಹಾರ್

ಚೈರ್ ಪದಕ್ ಟಿಕ್ಕಾ

ಕರಿಮಣಿಸರ ಬೋಲ್‌ಮಾಲಾ

ಕಾಸಿನಸರ ಮೇಲ್ಗುಂಡು

ಕತ್ತರಿಬುಗ್ಡಿ ಲ್ಯಾವಂಗಬುಗ್ಡಿ

ದೊಡ್ಡುಗ್ಡಿ ಮನ್ಯಾಂಕಾ ಹಾರ

| | |
|---|---|
| ಜಿಗನಾ | ಅಶರಫಿಯಾಂಕಾ ಹಾರ(ಕಾಸಿನ ಸರ) |
| ಗಲಸೇರಿ | ಚೌಂದಗಲಸೇರಿ |
| ಚೌಂದತಾರಾಗಲಸೇರಿ | ಜೈನು |
| ಚಪಲಹಾರ | ಲಿಂಬುಂಕಾಹಾರ |

ಮೋತಿಯೋಂಕಾಹಾರ(ಮುತ್ತಿನಹಾರ): ಮುತ್ತುಗಳಿಂದ ಕೂಡಿದ ಮುತ್ತಿನ ಹಾರ.

ಗುಂಡಿನಸರ: ಬಂಗಾರದಲ್ಲಿ ಇರುವ ಗುಂಡಿನ ಸರ.

ಗುಂಡಿನಟೀಕಿ: ಬಂಗಾರ, ಹರಳು ಅಥವಾ ಮುತ್ತುಗಳನ್ನು ಸೇರಿಸಿ ಮಾಡಿದ ಗುಂಡಿನ ಆಭರಣ.

ಗೆಜ್ಜೆ ಟೀಕು: ಗೆಜ್ಜೆಗಳನ್ನು ಸೇರಿಸಿ ಮಾಡಿದ ಹಾರ.

**ಕೈ ಆಭರಣಗಳು**

| | |
|---|---|
| ಬಳೆ | ಗಾಜಿನ ಬಳೆ |

ಮುತ್ತಿನ ಬಲೆ: ಮುತ್ತಿನಿಂದ ಕೂಡಿದ ಬಳೆ.

ಹರಳಿನ ಬಳೆ: ಹರಳುಗಳಿಂದ ಸಿದ್ಧಪಡಿಸಿದ ಬಳೆ.

ಗೋಟು: ಕೈ ಬಳೆಗಳ ಅಕ್ಕ ಪಕ್ಕದಲ್ಲಿ ಧರಿಸುವ ಬಳೆ.

ಪಾಟ್ಲಿ: ಕೈ ಬಳೆಗಳ ಹಿಂದೆ ಕೈಗಳಿಗೆ ಹಾಕುವ ಬಂಗಾರದ ಆಭರಣ.

ಬಿಲವಾರ: ಬಂಗಾರದಿಂದ ಮಾಡಿದ ಕೈ ಬಳೆಗಳು.

| | |
|---|---|
| ತೋಡೆ(ಕಂಗನ್) | ಚೂಡಿಯಾ |

**ತೋಳಿನಾಭರಣಗಳು**

ವಂಕಿ: ಲೋಳಿನಲ್ಲಿ ಧರಿಸುವ ಆಭರಣ.

ಬಾಂವಟಿ(ಬಾಹುಬಂಧ)ತೋಳಿನ 'ಹಿಂಭಾಗ, ಮುಂಭಾಗದಲ್ಲಿ 'ಗಿ' ರಚನೆಯಲ್ಲಿ ಬರುವಂತೆ ಸಿದ್ಧಪಡಿದ ಆಭರಣ

**ನಡುವಿನಾಭರಣ**

ಕಮರಪಟ್ಟಿ(ಕಟಿಬಂಧ) ಕಮಾರ ಬಂದ

ಲಿಜಾಂ ಕಡ್‌ದೋಡ್

ಸಾದಾ ಪಟ್ಟಿ: ಸಾಮಾನ್ಯವಾಗಿ ಯಾವುದೇ ಅಲಂಕಾರವಿಲ್ಲದ ಸೊಂಟದ ಆಭರಣ.

ಮಿಂಚುಪಟ್ಟಿ: ಇದರ ಮೇಲ್ಭಾಗ ನುಣುಪಾಗಿದ್ದು, ಬಹಳ ಹೊಳೆಯುವಂತಹ ಸೊಂಟದ ಆಭರಣ.

ಗೆಜ್ಜೆಪಟ್ಟಿ: ಸುತ್ತಲೂ ಗೆಜ್ಜೆಗಳಿಂದ ಕೂಡಿರುವುದೇ ಗೆಜ್ಜೆಪಟ್ಟಿ ಆಭರಣ.

**ಕಾಲಿನಾಭರಣ**

ಖಡೆ: ಕಾಲಿಗೆ ಧರಿಸುವ ಬೆಳ್ಳಿಯ ಅಥವಾ ಬಂಗಾರದ ಆಭರಣ.

ಫೈಜಬ್(ಪೈಜಾಣ) ಘಟ್ಟಖಡೆ

ಪಾಯಲ್ ಜಾಂಜರ ಚೈನು

ಕಾಲ್ಗೆಜ್ಜೆ: ಒಂದು ಮತ್ತು ಅನೇಕ ಎಳೆಗಳನ್ನು ಸೇರಿಸಿದ ಗೆಜ್ಜೆಗಳ ಗುಚ್ಚಗಳ ಆಭರಣ.

**ಕಾಲ್ಬೆರಳಿನ ಆಭರಣ**

ಛಲ್ಲೆ(ಪಿಲ್ಲಿ): ಇದನ್ನು ಕಿರು ಬೆರಳಿಗೆ ಹಾಕಿಕೊಳ್ಳುವರು.

ಸುರಳ್ಯಾ(ಸುರಳಿ): ಇದನ್ನು ನಾಲ್ಕನೆಯ ಬೆರಳಿಗೆ ಹಾಕಿಕೊಳ್ಳುವರು.

ಮಿಂಚು: ಇದು ಎಲೆಯ ಆಕಾರದಲ್ಲಿದ್ದು ಇದನ್ನು ನಾಲ್ಕನೆಯ ಬೆರಳಿಗೆ ಹಾಕಿಕೊಳ್ಳುವರು.

ಜೋಡವೆ(ಕಾಲುಂಗುರ)

ರುಳ್ಳಿ ಉಂಗುರ

**ನಾಸಿಕಾಭರಣ**

ನಥಿಯಾ/ನಥ್ಥಾ: ಮೂಗಿಗೆ ಹಾಕಿಕೊಳ್ಳುವ ಮೂಗುತಿ.

ಬುಲಾಕ: ಮೂಗಿನ ಹೊರಳಿಗಳ ಮಧ್ಯಭಾಗದಲ್ಲಿ ಧರಿಸುವ ಆಭರಣ.

ಎಲೆಮೂಗಬಟ್ಟು: ಎಲೆಯ ಆಕಾರದಲ್ಲಿರುವ ಆಭರಣ.

ಹರಳಿನ ಮೂಗಬಟ್ಟು: ಹರಳುಗಳನ್ನು ಜೋಡಿಸಿ ಮಾಡಿದ ಆಭರಣ.

**ಮುಡಿಯಾಭರಣ**

ಮುತ್ತಿನ ಗೊಂಡೆ: ಮುತ್ತುಗಳನ್ನು ಜೋಡಿಸಿ ಮಾಡಿದ ಆಭರಣ.

ಜರದಗೊಂಡೆ ಉಲನ್‌ಗೊಂಡೆ

ಚಾಂದತಾರಾ ಪಟ್ಟಿ: ತಲೆಮೇಲೆ ಹಾಕಿಕೊಳ್ಳುವ ಆಭರಣ.

ಮಾಂಗಟೀಲಾ(ಸೀಮಂತಮಣಿ): ಬೈತಲೆಯಲ್ಲಿ ಹಾಕಿಕೊಳ್ಳುವ ಆಭರಣ.

ಬಿಂದಿಯಾ: ಬೈತಲೆಯ ಮಧ್ಯದಲ್ಲಿ ಹಾಕುವ ಆಭರಣ.

**ಮುಂಗೈ ಆಭರಣ**

ಪಂಜಾ

**ಮುಸ್ಲಿಂ ಮಕ್ಕಳ ಆಭರಣಗಳು**

ಕೊರಳಲ್ಲಿ ಚೈನು ಬೆರಳಿಗೆ ಉಂಗುರ

ಕಾಲುಗಳಿಗೆ ಪೆಂಡೆರ ಗೆಜ್ಜೆ, ಮಾವಿನಕಾಯಿ ಗೆಜ್ಜೆಮಾಲೆ(ಹಾಲ್ಗಡಗ), ಚೈನು

ಚಿಕ್ಕ ಮಕ್ಕಳಿಗೆ ಕಿವಿ ಚುಚ್ಚಿ 'ಮುರುವು' ಹಾಕುತ್ತಾರೆ. ಜೊತೆಗೆ ರಿಂಗು, ಲೋಲಾಕು, ಜುಮಕಿ, ಮೂಗಿನಲ್ಲಿ ಮಲ್ಲಿ, ಕೊರಳಲ್ಲಿ ಚೈನು, ಕಾಲುಗಳಿಗೆ ಬೆಳ್ಳಿಯ ಚೈನು.

**ಲಂಬಾಣಿ ಸಮುದಾಯದ ಮಹಿಳೆಯರು ಧರಿಸುವ ಆಭರಣಗಳು**

**ಕಂಠಾಭರಣ**

ಬೆಳ್ಳಿಯ ಹಾಂಸಲಿ ಕೆಂಪು ಬಿಳಿಯ ಲಾಳ್ದಿಹಾರ

ಚಂದ್ರಾಕಾರದ ರಪಿಯಾಹಾರ ಕಾಶೀದಾರ

**ಕಾಲಿನ ಆಭರಣಗಳು**

ಚಟಕಿ ಬಿಚವಾ

**ಕೈ ಬೆರಳಿನ ಆಭರಣಗಳು**

ಮಾಟ್ಲೆ ವಿಂಟಿ

ಚಾಲಾವಿಂಟಿ ತಾಮ್ರದ ವಾಂಕಿಯಾ

ಗೆಜ್ಜೆ ಸರ

**ತೋಳ್ಬಂದಿ ಆಭರಣ**

ಕಸೋಟಿಯಾ

**ಸೊಂಟದ ಆಭರಣ**

ಬೆಳ್ಳಿಯ ಕಣದೋರೋ　　ವಾಂಸಳಿ

**ಕಿವಿಯ ಆಭರಣಗಳು**

ಕನಿಯಾ　　ಮುರುವು

**ನಾಸಿಕಾಭರಣಗಳು**

ಪೂಲಿ　　ಭೂರಿಯಾ

**ಕಾಲು ಆಭರಣಗಳು**

ತಾಮ್ರದ ವಾಂಕಿಯಾ　　ಗೆಜ್ಜೆ ಸರಗಳ ಜೋಡಿ

ಬೆಳ್ಳಿಯ ಕಡಗ

**ಮುಂಗೈ ಆಭರಣಗಳು**

ಬಿಳಿಯ ದಂತಿ ಚೂಡಿಗಳು　　ಕೆಂಪು ಬೋದ್ಲು

ತಾಮ್ರದ ಬಳೆಗಳು　　ಚೂಡೋ

ಮಂದಳ್ಯಾ

**ಮುಂಗೂದಲು ಆಭರಣಗಳು**

ಸಾದಾ ಟೋಪಲಿ　　ತುರುಬಿಗೆ ಉಣ್ಣೆಯಗೊಂಡೆ

ಘುಗುರಿ

**ತಲೆಕೂದಲು ಆಭರಣ(ತುರುಬು)**

ಅಂಟಿಗೆ ಟೋಪರೂಪೇರ　　ತುರುಬಿಗೆ ಉಣ್ಣೆಗೊಂಡೆ

ಕವಡಿಸರ　　ಕವಡೆಯ ಚೋಕಡಿ

**ಮಕ್ಕಳ ಆಭರಣಗಳು**

**ಕೈ ಆಭರಣಗಳು**

ಉಣ್ಣೆಯ ಬಳೆ — ಬಿಳಿಯ ಲಾಳ್ಡಿಹಾರ

ಪಾರಿಹಾರ — ಬಿಳಿಯ ಕರ್ಪೂರದ ಚೂಡಿಗಳು

**ಕಾಲಿನ ಆಭರಣಗಳು**

ಗರತಣಿ(ನಿಲಮಣಿಸರ) — ತಾಮ್ರದ ಅಂಬಳ್ಯಾ

**ಹೆಣ್ಣು ಮಕ್ಕಳು ಧರಿಸುವ ಆಭರಣಗಳು**

ಮೂಗಿನಾಭರಣ — ಪೂಲಿ

**ಕಿವಿಯಾಭರಣ**

ಓಲೆ

**ಸೊಂಟದ ಆಭರಣ**

ಕಾಶೀದಾರ

**ಕಂಠಾಭರಣ**

ಲಾಳ್ಡಿ (ಮಣಿಗಳು)ಹಾರ — (ಕೆಂಪು, ಬಿಳಿ, ಹಸಿರು, ಕರಿಬಣ್ಣದ)

**ಕೈ ಆಭರಣಗಳು**

ತಾಮ್ರದ ಬಳೆಗಳು

**ಕಾಲುಗೆ ಧರಿಸುವ ಆಭರಣಗಳು**

ಝೂಂಜರಾ — ಗರತಣಿ

**ಕಾಲ್ಬೆರಳಾಭರಣ**

ಪಿಲಿಯಾ

**ಗಂಡಸರು ಧರಿಸುವ ಆಭರಣಗಳು**

**ಕಿವಿಯಾಭರಣ**

ಬಂಗಾರದ ಮುರುವು

**ಕೈ ಬೆರಳಾಭರಣ**

ಉಂಗುರ

**ಮುಂಗೈ ಆಭರಣ**

ಬೆಳ್ಳಿಯ ಕಡಗ

**ಸೊಂಟದ ಆಭರಣಗಳು**

ಉಣ್ಣೆಯ ಗೊಂಡೆ ಕಣದೋರೋ

**ಧಾಲ್ಯ ಪಂಗಡ**

**ಮಹಿಳೆಯ ಆಭರಣಗಳು**

**ಕಾಲಿನ ಆಭರಣಗಳು**

ಕಾಲ್ಗಡಗ(ಸೀಮೆ ಬಳ್ಳಿಯ) ಕಸ್ಸೆ ಬಳ್ಳಿಯ ಚೈನು

ಹಿತ್ತಾಳೆಯ ವಾಂಕಡಿ

**ಬೆರಳಿನ ಆಭರಣ**

ಬೆಳ್ಳಿಯ ಮಿಂಚುವಾ ಚಟಿಕ(ತಾಮ್ರದ)

ಅಂಗುತ್ಲ(ಹಿತ್ತಾಳೆಯ)

**ಕಂಠಾಭರಣಗಳು**

ಕರಿಮಣಿ ಸರ

**ಕಿವಿಯ ಆಭರಣಗಳು**

ಸೀಮೆ ಬೆಳ್ಳಿಯ ಓಲೆ ಕೈ ಆಭರಣಗಳು

ಟೋಪಾಲಿ(ಹಿತ್ತಾಳೆಯ ಬಳೆ)

**ಕೂದಲಾಭರಣ**

ಘುಗರಿ ಟೋಪಾಲಿ ಕಡ್ಡಿ

**ಮೂಗಿನ ಆಭರಣ**

ಭುರಿಯಾ ಮೇಸರಿ

**ಗಂಡಸರು ಮತ್ತು ಮಕ್ಕಳು ಧರಿಸುವ ಆಭರಣಗಳು**

**ಕಿವಿಯಾಭರಣ**

ಓಲೆ

**ಸೊಂಟದಾಭರಣ**

ಉಡುದಾರ(ಬೆಳ್ಳಿಯ) ಕನದೊರೋ

**ಢಾಲ್ಯಾ ಪಂಗಡ**

ಭಾರತದ ಹಲವು ಬುಡಕಟ್ಟುಗಳಲ್ಲಿ ಲಂಬಾಣಿ ಸಮುದಾಯವು ಒಂದಾಗಿದೆ. ಲಂಬಾಣಿ ಸಮುದಾಯದಲ್ಲಿ 'ಢಾಲ್ಯ' ಪಂಗಡವು ಒಂದು. ಲಂಬಾಣಿಗರಂತೆ ಭಾಷೆ, ನಡೆ, ನುಡಿ ಒಂದೆಯಾದರೂ ವೇಷ ಭೂಷಣ, ಆಚರಣೆ ಮತ್ತು ಸಂಪ್ರದಾಯಗಳಲ್ಲಿ ಭಿನ್ನತೆ ಇದೆ. ಲಂಬಾಣಿಗರು ಮತ್ತು ಢಾಲ್ಯರ ಈ ಭಾಷೆ, ನಡೆ, ನುಡಿ ಒಂದೇಯಾದರೂ ಲಂಬಾಣಿಗರು ಇವರನ್ನು ಅಸ್ಪೃಷ್ಯರಂತೆ ಕಾಣುತ್ತಾರೆ. ಇವರು ಢಾಲ್ಯರನ್ನು ಲಂಬಾಣಿ ತಾಂಡಗಳಲ್ಲಿ ಮಾಹಿತಿದಾರರಾಗಿ, ಸೇವಕರಾಗಿ ಲಂಬಾಣಿಗರನ್ನು ಅವಲಂಬಿಸಿಯೇ ಇವರು ಜೀವನ ನಡೆಸುತ್ತಿದ್ದಾರೆ.

**ಉಡುಗೆ ತೊಡುಗೆ**

ಮಾನವನಿಗೆ ಆಹಾರ ಎಷ್ಟು ಮುಖ್ಯವೋ ಅಷ್ಟೇ ಪ್ರಮುಖವಾದದ್ದು ಉಡುಗೆ ತೊಡುಗೆ. ಆರಂಭದಲ್ಲಿ ಕಾಡು ಮತ್ತು ಗವಿಗಳಲ್ಲಿ ಆಶ್ರಯಿಸಿಕೊಂಡಿದ್ದ ಮಾನವನು ತನ್ನ ದೇಹಕ್ಕೆ ಉಡುಗೆಯ ಅಗತ್ಯ ತಿಳಿದಿರಲಿಲ್ಲ. ನಿಸರ್ಗದತ್ತವಾಗಿ ಕಾಡಿನಲ್ಲಿ ದೊರೆಯುತ್ತಿದ್ದ ಮರದ ತೊಗಟೆ, ತಪ್ಪಲು ಮುಂತಾದವುಗಳಿಂದ ತನ್ನ ದೇಹವನ್ನು ರಕ್ಷಿಸಿಕೊಳ್ಳಲು ಪ್ರಾರಂಭಿಸಿದ. ಅಲ್ಲದೆ ಕಾಡಿನಲ್ಲಿ ದೊರೆಯುತ್ತಿದ್ದ ಪ್ರಾಣಿಗಳ ಚರ್ಮ, ಪಕ್ಷಿಗಳ ರೆಕ್ಕೆ-ಪುಕ್ಕಗಳೇ ಉಡುಗೆಯಾಗಿದ್ದವು. ದೇಹಕ್ಕೆ ರಕ್ಷಣೆಯನ್ನರಿತ ಸಂದರ್ಭವೇ ಉಡುಗೆ-ತೊಡುಗೆಯ ಆವಿಷ್ಕಾರದ ಆರಂಭದ ಹಂತವೆನ್ನಬಹುದು.

ಉಡುಗೆ-ತೊಡುಗೆಗಳು ಪ್ರತಿಯೊಂದು ಬುಡಕಟ್ಟು ಸಮುದಾಯಗಳಲ್ಲಿಯೂ ಅವರು ವಾಸಿಸುವ ಪರಿಸರಕ್ಕೆ ಅನುಗುಣವಾಗಿ ಬದಲಾಗುತ್ತದೆ. ಹಾಗೆಯೇ ಲಂಬಾಣಿ ಸಮುದಾಯದ ಢಾಲ್ಯ ಪಂಗಡದವರು ಮೂಲತಃ ಲಂಬಾಣಿಗರ ಉಡುಗೆ-ತೊಡುಗೆಗಳಂತೆ ಇದ್ದು, ಈ ಎರಡು ಸಮುದಾಯಗಳು ಒಂದೇ ಎಂದು ಭಾಸವಾಗುತ್ತದೆ. ಆದರೆ ಸೂಕ್ಷ್ಮವಾಗಿ ಗಮನಿಸಿದಾಗ ಬದಲಾವಣೆ ಗುರಿತಿಸಬಹುದು. ಇವರ ಉಡುಗೆ-ತೊಡುಗೆಗಳಿಗೆ ತಮ್ಮದೇ ಆದ ಮಹತ್ವವಿದೆ.

ಪರಿಸರ ಪ್ರಿಯರಾದ ಲಂಬಾಣಿಗರ ಥಾಲ್ಯ ಪಂಗಡದವರು ತುಂಬಾ ರಸಿಕರು. ಅವರ ಉಡುಗೆ–ತೊಡುಗೆಗಳು ಇದಕ್ಕೆ ಸಾಕ್ಷಿ ಒದಗಿಸುತ್ತವೆ. ಅವರ ಭಾಷೆಯಂತೆ ಅವರ ಸ್ತ್ರೀಯರು ಧರಿಸುವ ವೇಷ–ಭೂಷಣಗಳು ಭಾರತದ ತುಂಬೆಲ್ಲಾ ಪಸರಿಸಿರುವ ಅವರನ್ನು ಗುರುತಿಸುವುದು ಸುಲಭ.

**ಮಹಿಳೆಯ ಆಭರಣಗಳು**

ಸ್ತ್ರೀಯರು ಸಹಜವಾಗಿಯೇ ಶೃಂಗಾರ ಪ್ರಿಯರು. ಅನೇಕ ಬಗೆಯ ಆಭರಣಗಳಿಂದ ಮಹಿಳೆಯರು ಶೃಂಗಾರಿಸಿಕೊಳ್ಳುತ್ತಾರೆ. ಲಂಬಾಣಿ ಮತ್ತು ಥಾಲ್ಯ ಸ್ತ್ರೀಯರು ಹಾಕಿಕೊಳ್ಳುವ ಉಡುಗೆ–ತೊಡುಗೆಗಳು ಎಷ್ಟು ಆಕರ್ಷಣೀಯವೋ ಅಷ್ಟೇ ಕುತೂಹಲಕಾರಿಯಾಗಿರುತ್ತವೆ. ಅಷ್ಟೇ ಭಾರವಾದವುಗಳಾಗಿವೆ.

**ಕಾಲಿಗೆ ಧರಿಸುವ ಆಭರಣಗಳು**

ಥಾಲ್ಯ ಪಂಗಡದ ಸ್ತ್ರೀಯರು ಕಾಲುಗಳಿಗೆ ಸೀಮೆ ಬಳ್ಳಿಯ 'ಕಾಲ್ಗಡಗ', ಹಿತ್ತಾಳೆಯ ವಾಂಕಡಿ 'ಕಸ್ಸೆ' ಬಳ್ಳಿಯ ಚೈನುಗಳನ್ನು ಹಾಕಿಕೊಂಡಿರುತ್ತಾರೆ.

**ಬೆರಳುಗಳಿಗೆ ಧರಿಸುವ ಆಭರಣಗಳು**

ಬೆರಳುಗಳಿಗೆ ಹಾಕಿಕೊಳ್ಳುವ ಈ ಆಭರಣಗಳು ಸುಮಂಗಲಿಯರ ಸೂಚಕವಾಗಿರುತ್ತದೆ. ಬೆಳ್ಳಿಯ ಮಿಂಚುವಾ, ತಾಮ್ರದ ಚಟಿಕ, ಹಿತ್ತಾಳೆಯ ಅಂಗುತ್ಲ ಶರಭರಿ ಹಾಕಿಕೊಂಡಿರುತ್ತಾರೆ.

**ಕೊರಳಿಗೆ ಧರಿಸುವ ಆಭರಣಗಳು**

ಇವರು ಲಂಬಾಣಿ ಸ್ತ್ರೀಯರ ಹಾಗೆ 'ಪಟಿಯಾ' ಹಳೆಯ ನಾಣ್ಯದ ಸರ, ರಪಿಯಾರಹಾರ, ಹಾಂಸಲಿ, ವಾಂಕ್ಯ ಇವುಗಳನ್ನು ಥಾಲ್ಯ ಪಂಗಡದ ಸ್ತ್ರೀಯರು ಧರಿಸಿಕೊಳ್ಳುವುದಿಲ್ಲ. ಇವರು ಸರಳವಾಗಿ ಕೊರಳಿನಲ್ಲಿ ಕರಿಮಣಿಯ ಸರವನ್ನು ಮಾತ್ರ ಹಾಕಿಕೊಂಡಿರುತ್ತಾರೆ.

**ಕಿವಿಗೆ ಧರಿಸುವ ಆಭರಣಗಳು**

ಕಿವಿಗಳಿಗೆ ಲಂಬಾಣಿಗರ ಹಾಗೆ 'ಕನಿಯಾ' ಹಾಕಿಕೊಂಡಿರುವುದಿಲ್ಲ. ಇವರು ಸರಳವಾಗಿ ಸೀಮೆ ಬೆಳ್ಳಿಯ ಓಲೆಯನ್ನು ಹಾಕಿಕೊಂಡಿರುತ್ತಾರೆ.

**ಕೈಗಳಿಗೆ ಧರಿಸುವ ಆಭರಣಗಳು**

ಇವರು ಲಂಬಾಣಿಗರ ಹಾಗೆ ತೋಳುಗಳಿಗೆ 'ಚೂಡೋ' ಬಲಿಯಾ ಹಾಕಿಕೊಳ್ಳುವುದಿಲ್ಲ. ಇಂದು ಲಂಬಾಣಿ ಮಹಿಳೆಯರಿಗೆ ಮಂಗಲ ಸೂತ್ರ ಸಂಕೇತವಾಗಿದೆ. (ಆದರೆ ಥಾಲ್ಯ

ಪಂಗಡದ ಸ್ತ್ರೀಯರು ಕೈಗಳಿಗೆ ಹಿತ್ತಾಳೆಯ ಬಿಳಿ 'ಟೋಪಾಲಿ' ಕೊರಳಿನ ಕರಿಮಣಿಯ ಸರ ಇವು ಮಾತ್ರ ಥಾಲ್ಯ ಪಂಗಡದ ಸ್ತ್ರೀಯರಿಗೆ ಮಂಗಲ ಸೂತ್ರವಾಗಿರುತ್ತದೆ)

ಎರಡು ಕೆನ್ನೆಗಳ ಪಕ್ಕದಲ್ಲಿ ಕೂದಲುಗಳಿಗೆ ಹೆಣೆದು ಇಳಿಬಿಟ್ಟಿರುವ ಬೆಳ್ಳಿಯ ಇಲ್ಲದೆ ಲೋಹದ ಘುಗರಿ ಹಾಕಿಕೊಳ್ಳುವುದು 'ಟೋಪಾಲಿ' ಕಡ್ಡಿ ಹಾಕಿಕೊಂಡಿರುತ್ತಾರೆ.

**ಮೂಗಿಗೆ ಧರಿಸುವ ಆಭರಣಗಳು**

**ಮೂಗಿಗೆ:** ಇವರಲ್ಲಿ ಅತ್ಯಂತ ಬೆಲೆಯುಳ್ಳ ಆಭರಣವೆಂದರೆ ಮೂಗಿಗೆ ಹಾಕಿಕೊಳ್ಳುವ 'ಭುರಿಯಾ' ಅಥವಾ ಮೇಸರಿ ಎಂದು ಕರೆಯುತ್ತಾರೆ. ಈ ಮೂಗುತಿ ಥಾಲ್ಯ ಸಮುದಾಯದ ಸ್ತ್ರಿಯರಿಗೆ ಮುಖದ ಸೋಗಸಿಗೆ ಇನ್ನಷ್ಟು ಕಳೆಯನ್ನುಂಟುಮಾಡುತ್ತದೆ.

ಈ ರೀತಿಯಲ್ಲಿ ಥಾಲ್ಯ ಪಂಗಡದ ಸ್ತ್ರೀಯರು ಹಿಂದೆ ಆಭರಣಗಳನ್ನು ಧರಿಸಿಕೊಳ್ಳುತ್ತಿದ್ದರು. ಆದರೆ ಇತ್ತೀಚೆಗೆ ನಾಗರಿಕತೆಯ ಪ್ರಭಾವದಿಂದ ಅವರು ಧರಿಸುವ ಆಭರಣಗಳಲ್ಲೂ ಬದಲಾವಣೆ ಕಂಡುಬಂದಿರುವುದನ್ನು ನೋಡಬಹುದು.

**ಗಂಡಸರು ಧರಿಸುವ ಆಭರಣಗಳು**

ಪುರುಷರು ಹಾಕಿಕೊಂಡಿರುವ ಆಭರಣಗಳಲ್ಲಿ ಅಷ್ಟು ವಿಶೇಷತೆಯನ್ನು ಕಂಡು ಬರುವುದಿಲ್ಲ. ಸಣ್ಣ ಮಕ್ಕಳು ಇರುವಾಗ ಕಿವಿಗೆ ಬೆಳ್ಳಿಯ ಅಥವಾ ಬಂಗಾರದ ಓಲೆಯನ್ನು ಹಾಕಿಕೊಂಡಿರುತ್ತಾರೆ. ವಯಸ್ಸು ಆದವರ ಕಿವಿಯಲ್ಲಿ ಸಹ ಓಲೆ ಇರುತ್ತದೆ. ಸೊಂಟಕ್ಕೆ ಒಂದು ಬಗೆಯ ವಿಶೇಷವಾದ ಬೆಳ್ಳಿಯ ಉಡುದಾರ ಇರುತ್ತದೆ. ಇದಕ್ಕೆ ಅವರು 'ಕಣದೊರೊ' ಎನ್ನುವರು. ಹೀಗೆ ಸ್ತ್ರೀ–ಪುರುಷರು ಆಭರಣಗಳನ್ನು ಧರಿಸಿಕೊಂಡಿರುತ್ತಾರೆ. ಇವರು ಇಂದಿಗೂ ಸಹ ತಮ್ಮ ಸಂಸ್ಕೃತಿಯ ಭಾಗವಾದ ಉಡುಗೆ–ತೊಡುಗೆಗಳ ಅನನ್ಯತೆಯನ್ನು ಉಳಿಸಿಕೊಂಡು ಬಂದಿದ್ದಾರೆ.

ಮೋಹನ ಮಾಳ

ಮೋಹನ ಮಾಲೆ

ರತ್ನಮಾಲೆ

ಲಾಡಿ

ಸರಗಿ ಬಂದಿ

ಹಾಗಲಕಾಯಿ(ತಾಳಿಸರದಲ್ಲಿರುವ ಪದಕದ ಒಂದು ಬಗೆ)

**ಕಂಠಾಭರಣಗಳು**

| | |
|---|---|
| ಅವಲಕ್ಕಿ ಸರ | ಅಷ್ಟದಳದ ಗುಂಡಿನ ಸರ |
| ಆಮೆ ಹೊಟ್ಟೆಯ ಸರ | ಎಲೆ ಮಣಿಸರ |
| ಕಂಟೀ ಸರ | ಕಂಠಿ ಸರ |
| ಕಟ್ವಾಣಿ ಸರ | ಕರಿಮಣಿ–ಚಿನ್ನದ ಗುಂಡಿನ ಸರ |
| ಕಾಫಿ ಬೀಜದ ಸರ | ಕಾಸಿನಸರ |
| ಕಾಳಿಮಟ್ಟಿ ಸರ | ಕೊತ್ತಂಬರಿ ಬೀಜದ ಸರ |
| ಕೊರಲ ಹತ್ತ ಸರ | ಕೊಳವೆ ಸರ |
| ಗರತಿ ಮಣಿ ಸರ | ಗುಂಡಿನ ಮಣಿಸರ |
| ಗುಂಡಿನ ಸರ | ಗೋದಿಸರ |
| ಚಕ್ರ ಸರ | ಚಪಲ ಸರ |
| ಜೋಮಾಲೆ ಸರ | ಟೀಕಿ ಸರ |
| ನಕ್ಷತ್ರ ಸರ | ನಾಗಸಂಪಿಗೆ ಸರ |
| ನೆಕ್ಲೇಸ/ಕುತ್ತಿಗೆ ಸರ | ನೆಲ್ಲಿಕಾಯಿ ಸರ |
| ನೆಲ್ಲಿ ಗುಂಡಿನ ಸರ | ತಳಕಿನ ಸರ(ನಾ) |
| ಪವನ ಸರ: ಅಡ್ಡಿಕೆಯ ಒಂದು ಮಾದರಿ | ಪಂಚ ಸರ |
| ಪಟ್ಟಿ ಸರ | ಪದಕದ ಸರ |
| ಪುತ್ಥಳಿ ಸರ | ಫರ್ಜಿಸರ |
| ಬಟಾಣಿ ಸರ | ಬವಳ ಸರ |
| ಬೋರ್ಮಾಳ್ಸರ | ಮಣಿ ಸರ |
| ಮಲ್ಲಿಗೆ ಸರ | ಮಾಣಿಕ ಸರ |
| ಮಾವಿನಕಾಯಿ ಸರ | ಮುತ್ತಿನ ಸರ |
| ಮುತ್ತಿನೆಕ್ಕ ಸರ | ಮೂರೆಳೆಯ ಚಿನ್ನದ ಗುಂಡಿನ ಸರ |
| ಮೇಲ್ಗುಂಡ್ಸರ | ಮೋಹನ ಮಾಲೆ ಸರ |
| ಶೃಂಗಾರ ಸರ | ಹವಳದ ಸರ |
| ಹಾಲುಮಣಿ ಸರ | ಚಿನ್ನದ ಹೂಮ ಕೊಳವೆಯ ಸರ |
| ಚೌಸರ | ತ್ರಿಸರ |

### ಸರ

ಆಭರಣಗಳಲ್ಲಿ ಕಂಠಾಭರಣಗಳನ್ನು ನೋಡುತ್ತೇವೆ. ಇದು ಕೊರಳಿಗೆ ಧರಿಸುವಂತಹದ್ದು. ಇದರಲ್ಲಿ ಹಲವಾರು ಬಗೆಯ ಹೆಸರುಗಳನ್ನು ನೋಡಬಹುದಾಗಿದೆ. ಗುಂಡಿನ ಸರ, ಕಾಸಿನ ಸರ, ಶೃಂಗಾರ ಸರ, ಅವಲಕ್ಕಿ ಸರ, ಮಾವಿನಕಾಯಿ ಸರ ಹೀಗೆ ಹಲವು ಹೆಸರುಗಳಿಂದ ಕರೆಯಲಾಗಿದೆ. ಗುಂಡಿನ ಸರ ಎಂದರೆ ಗುಂಡುಗಳಿಂದ ಕೂಡಿರುವಂತಹದ್ದಾಗಿದೆ. ಅವಲಕ್ಕಿ ಸರ ಇದು ಅವಲಕ್ಕಿಯ ಆಕಾರವನ್ನು ಹೊಂದಿರುವಂತಹದ್ದು. ಜನರು ತಮ್ಮಲ್ಲಿರುವ ವಸ್ತುಗಳ ಮೂಲಕ ಹೆಸರುಗಳನ್ನಿಟ್ಟು ಹೇಳುವಂತಹದ್ದಾಗಿರುತ್ತದೆ. ಹೀಗೆ ಜನರು ತಮ್ಮ ಪರಿಸರದಲ್ಲಿ ಬಳಕೆಯಲ್ಲಿರುವ ದಿನನಿತ್ಯದ ವಸ್ತುಗಳನ್ನು ಆಭರಣಗಳಿಗೆ ನಾಮಕರಣ ಮಾಡಿಕೊಂಡು ಬಂದಿರುವುದನ್ನು ನೋಡಬಹುದಾಗಿದೆ.

ಎಲೆ ಕಾಯಿ ಹೂವಿನ ಹಾರ/ಮಿಶ್ರಹಾರ

ಒತ್ತು ಕಾಸಿನ ಹಾರ

ಚಂದ್ರ ಹಾರ

ಚಿನ್ನದ ಹಾರ

ತೋರ ಹಾರ

ದೀಪದ ಹಾರ

ನೀಲಮಣಿ ಹಾರ

ಪದಕದ ಏಳು ಗುಂಡಿನ ಹಾರ

ಮುತ್ತಿನ ಹಾರ

ಹೀರಾ ಹಾರ

ಲಕ್ಷ್ಮಿ ಹಾರ

ಐದೆಳೆ ಮುತ್ತಿನ ಹಾರ

ಕಮಲ ಹಾರ

ಚಪಲ ಹಾರ

ಜೋಡಿಹಂಸ ಪದಕವಿರುವ ಹಾರ

ತ್ರಿಶೂಲ ಹಾರ

ನಕ್ಷತ್ರ ಹಾರ

ನವರತ್ನ ಹಾರ

ಪದಕದ ಹಾರ

ಸೂರ್ಯ ಹಾರ

ವಜ್ರದ ಹಾರ

### ಹಾರ

ಹಾರಗಳಲ್ಲಿಯೂ ವಿವಿಧ ರೀತಿಯ ಹೆಸರುಗಳಿರುವುದನ್ನು ನೋಡಬಹುದು. ಮುತ್ತಿನ ಹಾರ, ನವರತ್ನ ಹಾರ. ಇವು ಮುತ್ತು ಹಾಗೂ ನವರತ್ನಗಳನ್ನು ಬಳಸಿ ಸಿದ್ದಪಡಿಸಿದಂತಹ ಹಾರಗಳಾಗಿವೆ. ಮನುಷ್ಯ ತಾನು ದಿನನಿತ್ಯ ಪರಿಸರದಲ್ಲಿ ಕಾಣುವ ಹಾಗೂ ಪೂಜಿಸುವಂತಹವುಗಳನ್ನೇ ಆಭರಣಗಳಿಗೆ ಹೆಸರುಗಳಾಗಿ ಕರೆದಿರುವುದನ್ನು ಕಾಣಬಹುದು ಉದಾಹರಣೆಗೆ ಚಂದ್ರಹಾರ, ಸೂರ್ಯಹಾರ, ನಕ್ಷತ್ರ ಹಾರ ಎಂಬಿತ್ಯಾದಿ ಹೆಸರುಗಳಿಂದ ಕರೆಯುವುದನ್ನು ನಾವು ಕಾಣಬಹುದು.

| | |
|---|---|
| ಕೃಷ್ಣ ಪದಕ | ಕೆಂಪು ಹಲಗೆ ವಜ್ರ ಮುತ್ತಿನ ಪದಕ |
| ಕೃಷ್ಣ ಪದಕ | ಗೆಜ್ಜೆ ಪದಕ |
| ನಾಗರೆಡೆ ಪದ್ಕ | ಬಂಗಾರದ ಪದ್ಕ |
| ಮಣಿ ಪದಕ | ಮುತ್ತಿನ ಪದಕ |
| ವಜ್ರದ ಪದಕ | ಶಂಕು ಪದ್ಕ |
| ಹೂವಿನ ಪದ್ಕ | |

**ಉತ್ತರ ಕರ್ನಾಟಕದ ಆಭರಣಗಳು**

ಆಭರಣಗಳು ಪ್ರತಿಯೊಂದು ಪ್ರದೇಶ ಹಾಗೂ ಜನಾಂಗದಲ್ಲಿಯೂ ಒಂದಲ್ಲ ಒಂದು ಬಗೆಯ ಭಿನತೆಯಿಂದ ಕೂಡಿರುವುದು ಕಂಡುಬರುತ್ತದೆ. ಆಭರಣಗಳು ಅವರವರ ಸಂಪ್ರದಾಯ, ನಂಬಿಕೆಗಳ ಭಾಗವಾಗಿ ಧರಿಸುವುದನ್ನು ನೋಡಬಹುದು. ಆಭರಣಗಳು ಮಹಿಳೆಯರ ಸೌಭಾಗ್ಯದ ಸಂಕೇತಗಳಾಗಿವೆ. ಆದರೆ ಈಗೀನ ಆಧುನಿಕ ಯುಗದಲ್ಲಿ ಆಭರಣಗಳು ಬದಲಾವಣೆಯಾಗುವುದನ್ನು ನೋಡಬಹುದು. ಇದರಿಂದಾಗಿ ಹಿಂದಿನ ಆಭರಣಗಳು ಕಡಿಮೆಯಾಗುತ್ತಿವೆ.

**೩.೧. ಮಹಿಳೆಯರು ಧರಿಸುವ ಆಭರಣಗಳು**

**೧. ಕೊರಳಿನಾಭರಣಗಳು**

ಕೊರಳಿಗೆ ಹಾಕಿಕೊಳ್ಳುವಂತಹ ಆಭರಣಗಳು ಹಿಂದೆ ಪ್ರಕೃತಿಯಲ್ಲಿ ಇದ್ದಂತಹ ಹೂ, ಎಲೆ, ಕಾಯಿಗಳ ಆಕಾರಗಳ ಆಭರಣಗಳನ್ನು ಕೊರಳಿಗೆ, ಕುತ್ತಿಗೆಗೆ ಪಟ್ಟಿಯ ಹಾಗೂ ಕೊರಳಿನಿಂದ ಹೊಟ್ಟೆಯ ತನಕ ತೊಟ್ಟು ಸಂತೋಷಪಡುತ್ತಿದ್ದರೆಂದು ಹೇಳಬಹುದು.

**೧. ಅಡ್ಡಿಕೆ:** ಚಿನ್ನದ ಪಟ್ಟಿಗಳನ್ನು ಅರ್ಧಚಂದ್ರಾಕಾರವಾಗಿ ಪೋಣಿಸಿ ಮಾಡಿದ ಕೊರಳ ಆಭರಣ.

**೨. ಕಟ್ಟಾಣಿ:** ಅಗಲವಾದ ಒಂದು ಪಟ್ಟಿಯ ಮೇಲೆ ಬಂಗಾರದ ಸಣ್ಣ ಸಣ್ಣ ಗುಂಡುಗಳನ್ನು ಮೂರು ಅಥವಾ ನಾಲ್ಕು ಸಾಲುಗಳಲ್ಲಿ ಒಂದಕ್ಕೊಂದು ಕೂಡಿಕೊಂಡಿರುವಂತೆ ಜೋಡಿಸಿ, ಕೊರಳಿಗೆ ಸುತ್ತಲೂ ಬರುವ ಹಾಗೆ ರಚಿಸಿರುವುದೇ ಈ ಕಟ್ಟಾಣಿ ಕೊರಳ ಆಭರಣ.

**೩. ಚಿಂತಾಕು:** ಇದು ಹುಣಿಸೆ ಎಲೆ ಆಕಾರದ ಪದಕಗಳ ಸರವಾಗಿದೆ. ಪದಕಗಳ ಮೇಲೆ ಹರಳುಗಳನ್ನು ಹಾಕಿರುವುದುಂಟು. ಇದು ಒಂದು ಕಾಲದಲ್ಲಿ ಆಢ್ಯತೆಯ ಸಂಕೇತವಾಗಿತ್ತು. ಗರತಿಯ ಹಾಡಿನಲ್ಲಿ

ಚಿಂತಾಕು ಇಟಗೊಂಡು ಚಿಪ್ಪಾಡಿ ಬಳಿವಾಕೆ

ಚಿಂತಿಲ್ಲ್ಯೇನೆ ನಿನಗೆ

ನಿನ ಗಂಡ ಅಲ್ಲೊಬ್ಬಳ ಕೂಡ ನಗುತಿದ್ದ ಎಂಬ ಉಲ್ಲೇಖವಿದೆ.

ಕಂಠಾಭರಣಗಳಲ್ಲಿ ಮಾಲೆಗಳು, ಸರಗಳು, ಹಾರಗಳು, ಲೆಕ್ಕವಿಲ್ಲದಷ್ಟು ಇವೆ. ಇವೆಲ್ಲ ಕತ್ತಿನಿಂದ ಕೆಳಗೆ, ಬೇರೆ ಬೇರೆ ಅಂತರದಲ್ಲಿ ಜೋತಾಡುವ ಆಭರಣಗಳಾಗಿವೆ.

**೪. ಟೀಕಿ:** ಇದರಲ್ಲಿ ಬಂಗಾರದ ಗುಂಡಿನ ಟೀಕಿ. ಕರಿಮಣಿ ಟೀಕಿ ಇದೆ. ಬಂಗಾರ, ಬೆಳ್ಳಿ ಅಥವಾ ಮಾಲಿನ ಪಟ್ಟಿಯನ್ನು ಮಾಡಿ ಅದರಲ್ಲಿ ಬಂಗಾರದ ಗುಂಡುಗಳನ್ನು, ಹರಳುಗಳನ್ನು ಅಥವಾ ಮುತ್ತುಗಳನ್ನು ಸೇರಿಸಿ ಮಾಡಿದ ಆಭರಣಗಳ ಜೊತೆ ಬಂಗಾರದ ಗುಂಡುಗಳನ್ನು ಜೋಡಿಸಿದರೆ ಗುಂಡಿನ ಟೀಕಿಯಾಗುತ್ತದೆ. ಗುಂಡುಗಳ ಜೊತೆ ಕರಿಮಣಿ ಸೇರಿಸಿದರೆ ಕರಿಮಣಿ ಟೀಕಿಯಾಗುತ್ತದೆ. ಮುತ್ತುಗಳನ್ನು ಸೇರಿಸಿದರೆ ಮುತ್ತಿನ ಟೀಕಿಯಾಗುತ್ತದೆ.

**೫. ಮಾಲೆಗಳು:** ಇವುಗಳಲ್ಲಿ ನಕ್ಷತ್ರಮಾಲೆ, ಮೋಹನ ಮಾಲೆ, ಹೆಚ್ಚು ಜನಪ್ರಿಯ. ನಕ್ಷತ್ರಮಾಲೆ ಬಂಗಾರದ ನಕ್ಷತ್ರಗಳನ್ನು ಹೊಂದಿರುತ್ತದೆ. ಇದು ಸಾಮಾನ್ಯವಾಗಿ ಮುಸ್ಲಿಂ ಮಹಿಳೆಯರು ಮಂಗಳ ಸೂತ್ರದಲ್ಲಿ ನಕ್ಷತ್ರಗಳನ್ನು ಪೋಣಿಸಿ ಹಾಕಿಕೊಂಡಿರುತ್ತಾರೆ.

ರುದ್ರಾಕ್ಷಿಯಂತೆ ಕುಸುರಿ ಕೆಲಸ ಮಾಡಿ ತಯಾರಿಸಿದ ಬಂಗಾರದ ಗುಂಡುಗಳನ್ನು ಪೋಣಿಸಿ ಮಾಡಿದ ಕೊರಳ ಆಭರಣವೇ ಮೋಹನ ಮಾಲೆ.

**ಸರಗಳು:** ಕಂಠಾಭರಣಗಳಲ್ಲಿ ಹೆಚ್ಚು ವೈವಿಧ್ಯತೆಯನ್ನು ಸರಗಳ ಪಟ್ಟಿಯಲ್ಲಿ ಕಾಣುತ್ತೇವೆ.

ಕರಿಮಣಿಸರವನ್ನು ಮಾಂಗಲ್ಯದ ಸರವೆಂದು ಕರೆಯುತ್ತೇವೆ. ಆದ್ದರಿಂದ ನಮ್ಮ ಸಂಪ್ರದಾಯದಲ್ಲಿ ಮಣಿಸರಗಳಲ್ಲಿ ಕರಿಮಣಿಗೆ ಬಹಳ ಮಹತ್ವವಿದೆ. ಇದರಲ್ಲಿ ಹಲವಾರು ರೀತಿಯ ಮಾಂಗಲ್ಯಗಳನ್ನು ನೋಡಬಹುದು.

ತಾಳಿಯ ಕರಿಮಣಿ ಪೋಣಿಸುವಾಗ ನಾಲ್ಕು ಬಿಳಿಯ ಮಣಿ ಮತ್ತು ಹಸಿರು ಮಣಿ ಸೇರಿಸಿ ಹಾಲ್ಮಣಿ ಸರವನ್ನು ತಯಾರಿಸಿಕೊಳ್ಳುತ್ತಾರೆ. ಹವಳದಿಂದ ತಯಾರಿಸಿದ ಮಣಿಗಳನ್ನು ಹಾಗೆ ಪಚ್ಚೆ ಹರಳುಗಳನ್ನು ಸಹ ಬಂಗಾರದಲ್ಲಿ ಸೇರಿಸಿಕೊಂಡು ಕೊರಳಿಗೆ ಹಾಕಿಕೊಳ್ಳುತ್ತಾರೆ. ಹಾಗೆ ಗುಂಡುಗಳು ಬೋರಿಕಾಯಿಯ ಆಕಾರದಲ್ಲಿದ್ದರೆ ಅದು ಬೋಳಮಾಳ ಸರವೆಂದು ಹೇಳಬಹುದು.

ಬಂಗಾರದ ತಂತಿಯಲ್ಲಿ ಗೂಧಿಕಾಳಿನ ಆಕಾರದ ಗುಂಡುಗಳು ಪೋಣಿಸಿದರೆ ಅದು ಗೋಧಿಸರವೆನ್ನುತ್ತೇವೆ. ಹಾಗೆ ಬಂಗಾರದ ಚಪ್ಪಟೆ ತಗಡುಗಳಿಂದ ಅವಲಕ್ಕಿ ಆಕಾರ ರಚನೆ ಮಾಡಿ ಅದನ್ನು ಬಂಗಾರದ ತಂತಿಯಲ್ಲಿ ಕಟಿ ಸೇರಿಸಿದಾಗ ಅದನ್ನು ಅವಲಕ್ಕಿ ಸರ ಎಂದು ಹೆಸರು.

ಸಣ್ಣ ಸಣ್ಣ ಮಾವಿನಕಾಯಿಗಳ ಪದಕಗಳನ್ನು ಬಂಗಾರದಲ್ಲಿ ಸರದ ರೂಪದಲ್ಲಿ ಪೋಣಿಸಿದರೆ ಅದನ್ನು ಮಾವಿನಕಾಯಿಯ ಸರ ಎಂದು ಹೇಳಬಹುದು. ಇದರಲ್ಲಿ ನೆಲ್ಲಿಕಾಯಿ ಆಕಾರದ ಗುಂಡು, ಮಣಿಗಳನ್ನು ಸಹ ಸೇರಿಸುತ್ತಾರೆ.

ಆಯಾ ಕಾಲದಲ್ಲಿ ಇದ್ದಂತಹ ಬಂಗಾರ, ಬೆಳ್ಳಿ, ತಾಮ್ರ ಮುಂತಾದ ನಾಣ್ಯಗಳಿಗೆ ತೊಟ್ಟು ಹಚ್ಚಿ ಸರಮಾಡಿಕೊಂಡು ಕೊರಳಿಗೆ ಹಾಕುವರು. ಇಂಥಹದನ್ನು 'ಕಾಸಿನ ಸರ'ವೆಂದು ಹೇಳುವರು. ಜೊತೆಗೆ ಪ್ರಮುಖವಾಗಿ ಬಳಸಿರುವ ನಾಣ್ಯಗಳ ಆಧಾರದ ಮೇಲೆ ಪವನಸರ, ದುಡ್ಡಿನ ಸರ, ರಾಮಟಂಕಿ ಸರ, ಖರ್ಜಾತಿನ ಸರ, ದಮಡಿಸರ, ನಿಷ್ಕಹಾರ ಮುಂತಾದ ಹೆಸರುಗಳಿಂದ ಕರೆಯುವುದುಂಟು. ಹಾಗೇ ಬಂಗಾರದ ತಗಡನ್ನು ನಾಣ್ಯದಂತೆ ಕತ್ತರಿಸಿ ಅದರಲ್ಲಿ ಲಕ್ಷ್ಮಿ ಮತ್ತು ಬೇರ್‍ಯಾವುದಾದರೂ ದೇವರ ಆಕೃತಿಯನ್ನು ಉಬ್ಬು ಶಿಲ್ಪದಂತೆ ಚಿತ್ರಿಸಿ, ಅದನ್ನು ಒಂದರ ಮೇಲೊಂದರ್ಧ ಬರುವಂತೆ ಒಂದರ ಪಕ್ಕ ಪಕ್ಕ ಅಳವಡಿಸುತ್ತ ಬರುವರು. ಇದೇ ಪುತ್ಥಳಿಸರ. ಇದು ಕುತ್ತಿಗೆಗೆ ಹತ್ತುವಂತೆ ಅಡ್ಡಿಕೆ ಲೀಕಿರೂಪದಲ್ಲಿರಬಹುದು ಅಥವಾ ಮಾಲೆ, ಸರಗಳಂತೆ ಸಾಕಷ್ಟು ಉದ್ದವಾಗಿರಬಹುದು.

ಮಾವಿನಕಾಯಿ, ಹಾಗಲಕಾಯಿ ಆಕಾರದ ಪದಕಗಳು ಬಂಗಾರದಲ್ಲಿ ಕಟ್ಟಿಸಿದ ಹುಲಿಯುಗುರು ತಾಯಿತಗಳು ಬೇರೆ ಬೇರೆ ಆಕಾರದ ತಾಳಿಗಳು ಹೂವಿನಾಕಾರದ ಪದಕಗಳು ಇವನ್ನೆಲ್ಲ ಸೇರಿಸಿ ಪದಕದ ಸರವನ್ನು ತಯಾರಿಸುತ್ತಾರೆ.

ಈ ಮೇಲೆ ವಿವರಿಸಿದ ಸರಗಳಲ್ಲದೆ, ಜೋಮಾಲೆಸರ, ಶೃಂಗಾರಸರ, ಕಾಫಿ ಬೀಜದಸರ, ಮಾಣಿಕಸರ, ಪಂಚಸರ, ತ್ರಿಸರ, ಚೌಸರ, ಮಣಿಸರ, ಮುತ್ತಿನೆಕ್ಕಸರ, ಚಕ್ರಸರ, ಗೆಜ್ಜೆಸರ ಮುಂತಾದ ಹೆಸರಿನ ಸರಗಳು ಸಾಕಷ್ಟು ಇರುವುದನ್ನು ಉಲ್ಲೇಖಿಸಬಹುದಾಗಿದೆ.

ಈ ಮೊದಲೇ ಹೇಳಿದಂತೆ ಸರಗಳಂತೆ ಹಾರಗಳು ಉದ್ದನೆಯ ಕೊರಳ ಆಭರಣಗಳಾಗಿವೆ. ಮುತ್ತಿನಹಾರ, ನೀಲಮಣಿಹಾರ, ತ್ರಿಶಾಲಹಾರ, ಹೀರಾಹಾರ, ಚಂದ್ರಹಾರ, ಸೂರ್ಯಹಾರ, ಕಮಲಹಾರ, ತೋರಹಾರ, ನಕ್ಷತ್ರಹಾರ, ನವರತ್ನಹಾರಗಳೆಂಬ ಹೆಸರುಗಳೇ ಅವುಗಳ ಸ್ವರೂಪವನ್ನು ಹೇಳುತ್ತವೆ.

**ಸರಿಗಿ ಬಂದಿ:** ಇದನ್ನು ದಪ್ಪ ತಂತಿಯಿಂದ ಮಾಡುತ್ತಾರೆ. ಹಿಂದೆ ಮದುವೆಯಾದ ಹೆಣ್ಣಿನ ಗುರುತಾಗಿ ಸರಿಗಿ ಬಂದಿಯನ್ನು ತೊಡುತ್ತಿದ್ದರು. ಇದಕ್ಕೆ ಬಂಗಾರದ ಗುಂಡು ಅಥವಾ ಮುತ್ತುಗಳನ್ನು ಸೇರಿಸುತ್ತಾರೆ. ಇದನ್ನು ಮುಸ್ಲಿಮ್ ಮಹಿಳೆಯರಲ್ಲಿ ಹೆಚ್ಚಾಗಿ ಬಳಸುವುದು ಕಂಡುಬರುತ್ತದೆ.

**೨. ಕಾಲಿನ ಆಭರಣಗಳು**

ಇದನ್ನು ಸಾಮಾನ್ಯವಾಗಿ ಶುದ್ಧ ಬೆಳ್ಳಿಯಲ್ಲಿ ಅಥವಾ ಮಿಶ್ರ ಬೆಳ್ಳಿಯಲ್ಲಿ ಮಾಡಿರುತ್ತಾರೆ. ಬಂಗಾರವನ್ನು ಲಕ್ಷ್ಮಿ ಎಂದು ತಿಳಿದಿರುವುದರಿಂದ ಅದನ್ನು ಕಾಲಿಗೆ ಹಾಕುವುದಿಲ್ಲ. ಕಾಲು ಚೈನುಗಳಲ್ಲಿ ಸಾದಾ ಚೈನು, ಪಟ್ಟಿಚೈನು, ಕಳಾವರಚೈನು, ಗೋಡಂಬಿಚೈನು ಎಂಬ ವಿಧಗಳಿವೆ. ಚೈನಿಗೆ ಅಲ್ಲಲ್ಲಿ ಗೆಜ್ಜೆಯನ್ನು ಅಳವಡಿಸಿದರೆ ಅದನ್ನು ಗೆಜ್ಜೆಚೈನು ಎನ್ನುತ್ತಾರೆ.

**೧. ಕಾಲ್ಗಡಗ:** ಕೈಗೆ ಕಡಗ ಹಾಕುವಂತೆ ಕಾಲಿಗೂ ಸಹ ಇದನ್ನು ಮಾಡಿಸಿ ಹಾಕಿಕೊಳ್ಳುತ್ತಾರೆ.

**೨. ಗೆಜ್ಜೆ:** ಒಂದು ಮತ್ತು ಅನೇಕ ಎಳೆಗಳನ್ನು ಸೇರಿಸಿದ ಕಾಲುಚೈನಿಗೆ ಸುತ್ತಲೂ ಅಥವಾ ಅಲ್ಲಲ್ಲಿ ಗೆಜ್ಜೆಗಳ ಗುಚ್ಚವನ್ನು ಅಳವಡಿಸಿರುವುದೇ ಗೆಜ್ಜೆ

**೩. ಪೈಜಣ:** ಇದು ಕಾಲಿನ ಅತಿದೊಡ್ಡ ಆಭರಣ ಕುಸುರಿ ಕೆಲಸದಿಂದ ಕೂಡಿದ ಸುಮಾರು ೧೦ ಸೆಂ.ಮೀ ಅಗಲದ ಪಟ್ಟಿಕೆಗಳನ್ನು ಜೋಡಿಸಿ, ಕೆಳಗಡೆ ಗೆಜ್ಜೆಗಳನ್ನು ಅಳವಡಿಸುತ್ತಾರೆ.

**೪. ರುಳಿ:** ಇದನ್ನು ಬಂಗಾರದಲ್ಲಿಯೇ ತಯಾರಿಸುತ್ತಾರೆ. ಇದರಲ್ಲಿ ತೋಡೆರುಳಿ, ಕಳಗಿರುಳಿ ಮುಂತಾದ ಪ್ರಕಾರಗಳಿವೆ.

**೩. ಕಾಲ್ಬೆರಳಿನ ಆಭರಣಗಳು:**

ಇವು ಸೌಭಾಗ್ಯದ ಸಂಕೇತಗಳಾಗಿರುತ್ತವೆ. ಇದನ್ನು ಮದುವೆಯಾದಂತಹ ಹೆಣ್ಣುಮಕ್ಕಳು ಮಾತ್ರ ಧರಿಸುತ್ತಾರೆ. ಮದುವೆಯಾದ ಹೆಣ್ಣು ಮಕ್ಕಳು ತಮ್ಮ ಎರಡು ಕಾಲುಗಳ ಬೆರಳುಗಳಿಗೆ ಐದು ಅಥವಾ ಏಳು ಸುತ್ತಳತೆ ಇರುವ, ಬೆಳ್ಳಿಯಿಂದ ತಯಾರಿಸಿದ ಉಂಗುರಗಳನ್ನು ಧರಿಸುವುದು ಸಂಪ್ರದಾಯವಾಗಿದೆ.

**೧. ಉಳ್ಳಾಗಡ್ಡೆಪಿಲ್ಲಿ:** ಸಣ್ಣ ಸಣ್ಣ ಗುಂಡುಗಳನ್ನು ಹೂವಿನಂತೆ ಜೋಡಿಸುವುದನ್ನು ಉಳ್ಳಾಗಡ್ಡಿಪಿಲ್ಲಿ ಎಂದು ಕರೆಯುವರು. ಇದನ್ನು ನಾಲ್ಕನೆಯ ಬೆರಳಿಗೆ ಅಥವಾ ಕಿರುಬೆರಳಿಗೆ ಹಾಕಿಕೊಳ್ಳುತ್ತಾರೆ.

**೨. ಕಿರಿಪಿಲ್ಲಿ:** ಇದರಲ್ಲಿ ಕಳಸಪಿಲ್ಲಿ, ಗೋಟುಪಿಲ್ಲಿ, ನವಿಲುಪಿಲ್ಲಿ, ಮಿನಪಿಲ್ಲಿ, ಕಳವರಪಿಲ್ಲಿ ಎಂದು ಮುಂತಾದ ವೈವಿಧ್ಯಗಳಿವೆ. ಹೂವಿನ ಪಿಲ್ಲಿಯನ್ನು ಕಿರುಬೆರಳಿಗೆ ಹಾಕಿಕೊಳ್ಳುತ್ತಾರೆ.

ಮದುವೆಯಾದ ಮಹಿಳೆಯರು ಕರಿಮಣಿಸರ, ಬಳೆಗಳಂತೆ ಕಾಲುಂಗುರವನ್ನು ಅದರಲ್ಲಿ ಸುತ್ತಾಕಲುಂಗುರವನ್ನು ಧರಿಸುತ್ತಾರೆ.

೩. **ಮಿಂಚು:** ಇದರ ಮೇಲ್ಭಾಗ ನುಣುಪಾಗಿದ್ದು, ಬಹಳ ಹೊಳೆಯುವಂತಿದ್ದರೆ ಅಂದರೆ ಕೆತ್ತನೆ ಆ ರೀತಿಯಲ್ಲಿ ಮಾಡಲ್ಪಟ್ಟಿದ್ದರೆ ಅದನ್ನು ಮಿಂಚು ಎಂದು ಹೇಳುತ್ತಾರೆ. ಇದು ಎಲೆಯಾಕಾರದಲ್ಲಿದ್ದು ಇದನ್ನು ನಾಲ್ಕನೆಯ ಬೆರಳಿಗೆ ತೊಡುವರು.

೪. **ರನ್‌ಜೋಡು:** ಇದನ್ನು ಹೆಬ್ಬೆರಳಿಗೆ ಧರಿಸುತ್ತಾರೆ ಇದನ್ನು ಗೆಜ್ಜೆಯುಂಗುರವೆಂದು ಸಹ ಹೇಳಬಹುದು.

೫. **ವಾರಮೀನ:** ಇದು ಮೂರನೆಯ ಬೆರಳಿಗೆ ತೊಡುವ ಆಭರಣ. ಇದು ಆಕಾರದಲ್ಲಿ ಮೀನಿನಂತಿದ್ದು ಸ್ವಲ್ಪ ಓರೆಯಾಗಿರುತ್ತದೆ.

೬. **ಸುರುಳಿ:** ಇದು ಮೂರು ಗುಮ್ಮಟಗಳನ್ನು ಇಟ್ಟಂತೆ ಅಂದರೆ ಮೇಲ್ಭಾಗದಲ್ಲಿ ರಚನೆ ಇರುತ್ತದೆ. ಇದನ್ನು ನಾಲ್ಕನೆಯ ಬೆರಳಿಗೆ ಹಾಕಿಕೊಳ್ಳುತ್ತಾರೆ.

೭. **ಸುತ್ತಾಕಲುಂಗುರ:** ಇದು ಮುತ್ತೈದೆಯ ಸಂಕೇತ. ಇದನ್ನು ಮದುವೆಯದಿನ ಮದುಮಗಳಿಗೆ ಎರಡನೆಯ ಬೆರಳಿಗೆ ಹಾಕಿರುತ್ತಾರೆ.

**೪. ಕಿವಿಯ ಆಭರಣಗಳು**

ಇದು ಕೂಡಾ ಸೌಂದರ್ಯದ ಒಂದು ಭಾಗ. ನಮ್ಮ ಜನಪದರು ಕಿವಿಗೆ ಏಳಕ್ಕಿಂತ ಹೆಚ್ಚು ಆಭರಣಗಳನ್ನು ಹಾಕಿಕೊಳ್ಳುತ್ತಿದ್ದರು. ಇವರ ಸೌಂದರ್ಯದೃಷ್ಟಿ, ಸೂಕ್ಷ್ಮತೆಗಳನ್ನು ನಾವು ಊಹಿಸಬಹುದಾಗಿದೆ.

೧. **ಅಗಸಿಕಡ್ಡಿ:** ಇದು ಕಿವಿಯ ಒಂದು ಚಿಕ್ಕ ಆಭರಣ. ಇದು ಕಿವಿಯ ಮೇಲ್ಭಾಗದ ಅಂಚಿನಲ್ಲಿ ಮುರುವಿಗಿಂತ ಸ್ವಲ್ಪ ಕೆಳಗೆ ಇದನ್ನು ಹಾಕಿಕೊಳ್ಳುತ್ತಾರೆ. ಇದು ಲವಂಗದ ಆಕಾರದಲ್ಲಿರುವುದರಿಂದ ಇದನ್ನು ಲವಂಗದಕಡ್ಡಿ ಅಥವಾ ಲವಂಗದ ಹೂವು ಎಂದು ಸಹ ಕರೆಯಬಹುದು.

೨. **ಓಲೆ:** ಇದು ಮುತ್ತೈದೆಯ ಒಂದು ಸಂಕೇತವಾಗಿದೆ. ಪೂರ್ವದಲ್ಲಿ ಓಲೆಗರಿಯಿಂದ ಮಾಡುತ್ತಿದ್ದರು. ಆದರೆ ಈಗ ಬಂಗಾರ, ಮುತ್ತು, ವಜ್ರ, ಹರಳು, ರತ್ನ ಮುಂತಾದವುಗಳಿಂದ ಓಲೆ ಮಾಡಲಾಗುತ್ತಿದೆ. ಓಲೆಗೆ ಬಳಸುವ ವಸ್ತುಗಳ ಹೆಸರಿನಿಂದಲೇ ಹೊನ್ನೋಲೆ, ಮುತ್ತಿನೋಲೆ, ವಜ್ರದೋಲೆ, ರತ್ನದೋಲೆ ಎಂಬಿತ್ಯಾದಿ ಹೆಸರುಗಳಿಂದ ಕರೆಯಲಾಗುತ್ತಿದೆ.

೩. **ಕೊಪು:** ಬುಗುಡಿಯಿಂದ ತುರುಬಿನವರೆಗೆ ಒಂದರಿಂದ ಐದು ಎಳೆಗಳವರೆಗಿನ ಸರಪಳಿಯನ್ನು ಬುಗುಡಿ ಸರಪಳಿ ಎಂದು ಕರೆಯುತ್ತಾರೆ.

೪. **ಚೌಕಳಿ:** ಇದು ಸಾಮಾನ್ಯವಾಗಿ ಬಂಗಾರ ಮತ್ತು ಮುತ್ತುಗಳಲ್ಲಿ ಮಾಡಿರುತ್ತಾರೆ. ಇದನ್ನು ಕಿವಿಯ ಮುಂಭಾಗದಲ್ಲಿ ಬಾವಲಿಯ ಮೇಲೆ ಈ ಆಭರಣವನ್ನು ಧರಿಸುತ್ತಾರೆ. ಇವುಗಳಿಗೆ ಹೂವಿನ ಚೌಕುಳಿ ಆಕಾರ ಮೇಲಿಂದ ಕರೆಯುತ್ತಾರೆ. ವಸ್ತುವಿನ ಮೇಲಿಂದ ಮುತ್ತಿನ ಚೌಕುಗಳು ನೀಲ ಮುತ್ತಿನ ಚೌಕಳಿ ಎಂದು ಕರೆಯಲಾಗುತ್ತದೆ.

೫. **ಜಾಲರಿ:** ಇದನ್ನು ಬಂಗಾರದ ಗುಂಡುಗಳನ್ನು ಅಥವಾ ಮುತ್ತುಗಳನ್ನು ಜಾಲರಿಯ ಕೆಳಗೆ ಇಳಿಬಿಟ್ಟಿರುವುದನ್ನು ಕಾಣುತ್ತೇವೆ. ಇದನ್ನು ಕಿವಿಯೋಲೆ ಕೆಳಗೆ ಅರ್ಧಚಂದ್ರಾಕೃತಿಯಲ್ಲಿ ಶೋಭಿಸುವಂತೆ ಓಲೆಯ ಕಡ್ಡಿಗೆ ಸೇರಿಸಿ ಇಳಿ ಬಿಡುವ ಒಂದು ಆಭರಣ.

೬. **ಜುಮುಕಿ:** ಇದರಲ್ಲಿ ಸೂಕ್ಷ್ಮ ಕೆತ್ತನೆಯುಳ್ಳ ಗಂಟೆಯಾಕಾರದ ಆಭರಣವನ್ನು ಸರಪಳಿಯ ಮೂಲಕ ಕಿವಿಯೋಲೆಗೆ ಜೋಡಿಸಿ ಅದು ಜೋಲುವಂತೆ ಮಾಡುತ್ತಾರೆ. ಕೆಲವು ಬಾರಿ ಗಂಟೆಯಾಕಾರಕ್ಕೂ ಸರಪಳಿಗೂ ಸರಿಹೊಂದಾಣಿಕೆಯಾಗುವ ಬಣ್ಣ ಬಣ್ಣದ ಹರಳುಗಳನ್ನು ಅದರಲ್ಲಿ ಜೋಡಿಸಿರುತ್ತಾರೆ. ಗಂಟೆಯ ಕೆಳಗಡೆ ಬಂಗಾರದ ಸಣ್ಣ ಗುಂಡು, ಮುತ್ತು ಜೋತು ಬಿಡುತ್ತಾರೆ.



೭. **ತಾಲೂಕ:** ಇದನ್ನು ಕಿವಿಯ ಹಾಲೆಗಿಂತ ಸ್ವಲ್ಪ ಮೇಲೆ ಹಾಕಿರುವ ತೂತಿಗೆ ತಾಲೂಕವನ್ನು ಹಾಕಿಕೊಳ್ಳುತ್ತಾರೆ ಇದನ್ನು ಬಂಗಾರದಿಂದಲೇ ಮಾಡಿದ್ದು ಇದರ ಮಧ್ಯೆ ಚೌಕಾಕಾರದಲ್ಲಿ ಹರಳುಗಳನ್ನು ಜೋಡಿಸಿರುತ್ತಾರೆ. ಹಾಗೇ ಕೆಳಭಾಗಕ್ಕೂ ಮುತ್ತುಗಳನ್ನು ಜೋಡಿಸಿರುತ್ತಾರೆ.

೮. **ದ್ರಾಕ್ಷಿಪಟ್ಟಿ:** ಇದನ್ನು ಬುಗುಡಿಗಿಂತ ಮೇಲೆ, ತಲೆಕೂದಲಿಗೆ ಸಿಕ್ಕಿಸಿಕೊಳ್ಳಲು ಬರುವಂತೆ ಇದರ ರಚನೆ ಇರುತ್ತದೆ.

೯. **ಬುಗುಡಿ:** ಇದು ಸೌಭಾಗ್ಯ ಸೂಚಕ ಆಭರಣ. ಇದನ್ನು ಕಿವಿಯ ಮೇಲ್ಭಾಗದಲ್ಲಿ ಹಾಕಿಕೊಳ್ಳುತ್ತಾರೆ. ಹೆಣ್ಣು ನಿಶ್ಚಯವಾದಾಗ ಗಂಡಿನ ಮನೆಯವರು ಸಂಕೇತವಾಗಿ ಬುಗುಡಿಯನ್ನು ವಧುವಿಗೆ ಕೊಡುತ್ತಿದ್ದರು. ಇದಕ್ಕೆ 'ಮುಗುಳು' ಎಂದು ಕೂಡಾ ಕರೆಯುತ್ತಾರೆ. ಇದರಲ್ಲಿ ಕಡ್ಡಿ ಬುಗುಡಿ, ಎಲೆ ಬುಗುಡಿಕಾಯಿ, ನೆಲ್ಲಿಕಾಯಿಯ ಬುಗುಡಿ, ಗೆಜ್ಜೆ ತಳಗಿನ ಬುಗುಡಿ ಎಂಬ ಭಿನ್ನ ರೀತಿಗಳಲ್ಲಿ ನಾವು ನೋಡಬಹುದು.

ಕೆಳಗೊಂದು ಸಣ್ಣ ಗುಂಡು ಇದ್ದರೆ ಅದನ್ನು ಕಡ್ಡಿ ಬುಗುಡಿ ಎಂದು, ಮುತ್ತು ಇದ್ದಾಗ ಮುತ್ತಿನ ಬುಗುಡಿ ಎಂದು, ಬಂಗಾರದ ಗುಂಡುಗಳಿದ್ದರೆ ಬಂಗಾರದ ಗುಂಡಿನ ಬುಗುಡಿ ಎಂದು ಕರೆಯುತ್ತಾರೆ.

೧೦. **ಲೋಲಾಕು:** ಜುಮುಕಿ ಬಂಟೆಯಾಕರದಲ್ಲಿದ್ದರೆ, ಲೋಲಾಕು ಚಪ್ಪಟೆಯಾಗಿರುತ್ತದೆ. ಇದನ್ನು ಬಂಗಾರ, ಮುತ್ತು ಹವಳದಿಂದ ತಯಾರಿಸುತ್ತಿದ್ದು ಕಿವಿಯ ಓಲೆಯ ಕಡ್ಡಿಗೆ ಸರಪಳಿಯ ಮೂಲಕ ಅದನ್ನು ಜೋಡಿಸುತ್ತಾರೆ.

೧೧. **ಬಾವಲಿ:** ಕಿವಿಯ ಒಂದು ಮಗ್ಗುಲಿನ ಸಣ್ಣ ಭಾಗಕ್ಕೆ ಬಾವಲಿಯನ್ನು ಧರಿಸುವರು. ಇದನ್ನು 'ಬಾವಲಿ', 'ಬಾಳ' ಎಂದು ಕರೆಯುತ್ತಾರೆ.

೧೨. **ಮಿಂಚಪಟ್ಟಿ:** ಇದನ್ನು ಕಿವಿಯ ಓಲೆಯಿಂದ ಕಿವಿಯ ಮೇಲಿನ ತಲೆಕೂದಲಿಗೆ ಕೊಂಡಿಯ ಸಹಾಯದಿಂದ ಹಾಕಿಕೊಳ್ಳುವರು. ಇದನ್ನು ಬಂಗಾರದಲ್ಲಿಯೇ ಮಾಡಲ್ಪಟ್ಟ ಸರಪಳಿ ಎಂದು ಹೇಳಬಹುದು.

೧೩. **ಹುಜರ:** ಇದು ಕಿವಿಯ ಆಭರಣವಾಗಿದೆ. ಇದನ್ನು ತಾಲೂಕಿಗಿಂತ ಮೇಲೆ. ಅಗಸಿಕಡ್ಡಿಯ ಕೆಳಗೆ ಹಾಕುವಂತದ್ದು. ಇದು ಮೂಗುಬಟ್ಟಿನ ಒಂದು ಆಕಾರ ಹೊಂದಿದ್ದು ಒಂದೇ ಹರಳಿನ ಹುಜರನ ಕೆಳಗೆ ಸಣ್ಣ ಮುತ್ತುಗಳು ಜೋತಾಡುವ ಹಾಗೆ ಮಾಡಿರುತ್ತಾರೆ.

**೩. ಜಡೆಯ ಆಭರಣಗಳು**

ಹೆಣ್ಣುಮಕ್ಕಳು ಹಿಂದಲೆಯಿಂದ ಕೆಳಗೆ ಜಡೆಗೆ ಧರಿಸುವ ಆಭರಣಗಳು.

೧. **ಜಡೆ ಬಂಗಾರ:** ಇದನ್ನು ವಿಶೇಷ ಸಂದರ್ಭಗಳಲ್ಲಿ ಮಾತ್ರ ಹಾಕಿಕೊಳ್ಳುವರು. ಜಡೆಯ ಮೇಲ್ಭಾಗದಿಂದ ತುದಿಯವರೆಗೂ ಬಂಗಾರದ ಹೂವುಗಳನ್ನು ಕಟ್ಟಲಾಗುತ್ತದೆ. ಇದನ್ನು 'ಹೆರಳ ಬಂಗಾರ' ಎಂದು ಕರೆಯುತ್ತಾರೆ. ಇದು ತಲೆಕೂದಲಿನ ಆಕಾರಕ್ಕೆ ತಕ್ಕಂತೆ ಮೇಲೆ ಅಗಲವಾಗಿದ್ದು ಕೆಳಗೆ ಸಣ್ಣದಾಗಿರುತ್ತದೆ. ಹೀಗೆ ಮಾಡುವುದಕ್ಕೆ ಹೇರಳ ಬಂಗಾರ ಬೇಕಾಗುತ್ತದೆ. ಹಾಗೆ ಇದರಲ್ಲಯೇ ಮೊಗ್ಗಿನ ಜಡೆ, ಗಿಳೀ ಹರಳು, ಜಡೆಬಿಲ್ಲೆ, ಜಡೆನಾಗರ, ಜಡೆಸರ ಎಂದು ವಿವಿಧ ಬಗೆಗಳಿವೆ.

೨. **ಜಡೆಬಿಲ್ಲೆ:** ಜಡೆಗೆ ಮೇಲಿನಿಂದ ಕೆಳಗೆ ಹಾಕುವಾಗ ಗಾತ್ರದಲ್ಲಿ ಮೊದಲು ದೊಡ್ಡದಿದ್ದು ನಂತರ ಕೆಳಗೆ ಚಿಕ್ಕದಾಗುತ್ತ ಬರುತ್ತದೆ. ಕೆಲ ಸ್ಥಿತಿವಂತರು ಈ ಬಿಲ್ಲೆಗಳ ಮೇಲೆ ಬಣ್ಣ ಬಣ್ಣದ ಹರಳುಗಳನ್ನು ಜೋಡಿಸುತ್ತಾರೆ. ಇದರಿಂದ ಜಡೆಬಿಲ್ಲೆಯ ಸೌಂದರ್ಯ ಹೆಚ್ಚುತ್ತದೆ. ಜೊತೆಗೆ ಕೆಳಗಡೆ ಬಂಗಾರದ ಗುಂಡುಗಳನ್ನು ಜೋಡಿಸುತ್ತಾರೆ.

**೩. ಜಡೆನಾಗರ:** ಬಂಗಾರದಲ್ಲಿ ಹಾವಿನ ರೂಪರಚನೆಯನ್ನು ಮಾಡಿರುತ್ತಾರೆ. ಇದನ್ನೇ ಜಡೆನಾಗರ ಎಂದು ಹೇಳಬಹುದು. ಇದು ನಾಗಾರಾಧನೆಯ ಜನಪ್ರಿಯತೆಯ ಹಿನ್ನೆಲೆಯಲ್ಲಿ ಇದು ಬಂದಿರಬಹುದೆಂದು ಹೇಳಬಹುದು.

**೪. ಜಡೆಸರ:** ಮುತ್ತು ಅಥವಾ ಬಂಗಾರದ ಗುಂಡುಗಳನ್ನು ಕೂಡಿ ಸೇರಿಸಿ ಸರವನ್ನು ಮಾಡಿ ಬಳ್ಳಿಯಂತೆ ಜಡೆಯ ಸುತ್ತಲೂ ಸುತ್ತುವುದಕ್ಕೆ ಜಡೆಸರ ಎಂದು ಹೇಳುವರು.

**೫. ಜಡೆಗೊಂಡೆ:** ಜಡೆಯ ತುದಿಯನ್ನು ಗೊಂಡೆಗಳಿಂದ ಅಲಂಕರಿಸಲಾಗುತ್ತದೆ. ಇದನ್ನು ಬಂಗಾರದಿಂದ ಮಾಡಿರುತ್ತಾರೆ. ಜರಿ, ರೇಶ್ಮೆ, ಉಣ್ಣೆ ಇವೆಲ್ಲವನ್ನು ಬಳಸಿ ಗೊಂಡೆಗಳನ್ನು ಮಾಡಬಹುದು. ಹೀಗೆ ಬೇರೆ ಬೇರೆ ವಸ್ತುಗಳನ್ನು ಬಳಸಿಕೊಂಡು ಸಿದ್ದಪಡಿಸಿದ ಆಭರಣಗಳಿಗೆ ಬಂಗಾರದಗೊಂಡೆ, ರೇಶ್ಮೆಗೊಂಡೆ, ಜರದಗೊಂಡೆ ಎಂಬ ಹೆಸರುಗಳಿಂದ ಕರೆಯುತ್ತಾರೆ.

**೬. ಗಿಳಿಹೆರಳು:** ಮೊಗ್ಗಿನ ಆಕಾರದ ಬದಲಾಗಿ, ಗಿಳಿಗಳ ಚಿತ್ರರಚಿಸಿದ್ದರೆ ಅಂತವುಗಳನ್ನು ಗಿಳಿ ಹೆರಳು ಎಂದು ಕರೆಯುತ್ತಾರೆ. ಇಲ್ಲಿ ಒಂದೇ ಗಿಳಿ ಇರಬಹುದು ಅಥವಾ ಪಟ್ಟಿಯ ಆಚೆ ಈಚೆಯೂ ಎರಡು ಗಿಳಿಗಳು ಇರಬಹುದು. ಜೋಡಿ ಗಿಳಿಗಳಿದ್ದರೆ ಇವುಗಳನ್ನು 'ಜೋಡುಗಿಳಿ ಹೆರಳು' ಎಂದು ಕರೆಯುವರು.

**೭. ಮೊಗ್ಗಿನ ಜಡೆ:** ಬಂಗಾರವನ್ನು ಬಳಸಿ ಮಲ್ಲಿಗೆ ಮೊಗ್ಗಿನ ಆಕಾರದಲ್ಲಿ ಸಿದ್ದಪಡಿಸಿದ ಆಭರಣಕ್ಕೆ ಮೊಗ್ಗಿನ ಜಡೆ ಎಂದು ಕರೆಯುವರು.

**೬. ತೋಳಿನ ಆಭರಣಗಳು**

**೧. ತೋಳಬಂದಿ:** ಇದನ್ನು ಬಾಜುಬಂದ, ಬಾಹುಬಂದ ಎಂದು ಕರೆಯುವರು. ಇದು ಬಂಗಾರದ ಪಟ್ಟಿಯಂತೆ ಇದ್ದು ಅದರ ಮೇಲೆ ಸುಂದರವಾಗಿ ಕೆತ್ತನೆಯಿರುತ್ತದೆ. ಮಧ್ಯದಲ್ಲಿ ರತ್ನ ಅಥವಾ ಬಣ್ಣದ ಹರಳುಗಳನ್ನು ಕೆತ್ತಿರುತ್ತಾರೆ. ಪಟ್ಟಿಯ ಕೆಳಗೆ ಮುತ್ತಿನ ಎಲೆ ಇರುತ್ತದೆ. ತೋಳಿಗೆ ಹಿಡಿದುಕೊಳ್ಳಲು ಕೀಲಿನ ಮತ್ತು ಕಸೆಯ ರೀತಿಯಲ್ಲಿ ಆಭರಣ ರಚಿಸಲಾಗಿರುತ್ತದೆ. ಇದೇ ರೀತಿ ವಂಕಿ, ನಾಗಮುರುಗಿ, ಚಳಕಿ ಮುಂತಾದವುಗಳನ್ನು ಸಹ ನೋಡಬಹುದು.

**೨. ನಾಗ ಮುರುಗಿ:** ಇದು ಬಂಗಾರದಲ್ಲೇ ಮಾಡಿ, ಮುಂಭಾಗದಲ್ಲಿ ನಾಗರ ಹಾವಿನ ಹೆಡೆಯಂತೆ ಇದ್ದು, ಸುತ್ತಲೂ ಹಾವಿನ ದೇಹದಂತೆ ಮುರುಗಿ ಮುರುಗಿ ಸುಳುವಿನ ರಚನೆಯ ರೀತಿಯಲ್ಲಿ ಸುತ್ತುವರೆದಿರುತ್ತದೆ. ಇದು ಹೆಚ್ಚು ಕಲಾತ್ಮಕವಾದಂತಹ ಆಭರಣವೆಂದೆನ್ನಬಹುದು.

**೩. ವಂಕಿ:** ಇದು ತೋಳಿಗೆ ಹಾಕಿಕೊಳ್ಳುವಂತಹದ್ದು. ಇದು ತೋಳಿಗೆ ಮುಂಭಾಗ, ಹಿಂಭಾಗಗಳಲ್ಲಿ 'ಗಿ' ಆಕಾರದಲ್ಲಿ ರಚನೆ ಬರುವ ಹಾಗೆ ಬಂಗಾರದಲ್ಲಿ ರಚಿಸಿರುತ್ತಾರೆ.

**೭. ತೋಳ್ಬಳೆಗಳು**

ಬಳೆ ಮುತ್ತೈದೆಯ ಸಂಕೇತ. ಇದನ್ನು ಬೆಳ್ಳಿ, ಓತ್ತಾಳೆ, ಕಂಚು, ತಾಮ್ರಗಳಿಂದ ಮತ್ತು ಮಿಶ್ರ ಲೋಹಗಳಿಂದ ರಚಿಸಲಾಗುವುದು. ಕೆಲವು ಸಲ ತೋಳಿಗೆ ಕರಿದಾರ, ತಾಯಿತ ಕಟ್ಟಿಕೊಳ್ಳುತ್ತಾರೆ.

ತೋಳ್ಬಳೆಯನ್ನು ಬಿಟ್ಟರೆ ಯಾವುದೇ ರೀತಿಯಲ್ಲಿ ಬೇರೆ ಆಭರಣಗಳನ್ನು ನಿತ್ಯ ಬಳಸುವುದಿಲ್ಲ. ಮನೆತನದ ವಿಶೇಷ ಸಂದರ್ಭಗಳಲ್ಲಿ ಇಂತಹ ಆಭರಣಗಳನ್ನು ಬಳಸುತ್ತಾರೆ.

ಚಿನ್ನ, ಬೆಳ್ಳಿ, ತಾಮ್ರ, ದಂತ, ಮಣ್ಣು, ಗಾಜುಗಳಿಂದ ತಯಾರಿಸಿದ ಬಳೆಗಳನ್ನು ಹೆಣ್ಣುಮಕ್ಕಳು ಹಾಕಿಕೊಳ್ಳುವರು. ಚಿನ್ನ, ಬೆಳ್ಳಿ, ತಾಮ್ರ ದಂತಹ ಬಳೆಗಳನ್ನು ಬುಡಕಟ್ಟು ಅಥವಾ ಅಲೆಮಾರಿ ಸಮುದಾಯಗಳು ಹೆಚ್ಚು ಬಳಸುತ್ತಿರುವುದು ಕಂಡುಬರುತ್ತದೆ.

**೧. ಬಂಗಾರದ ಬಳೆಗಳು:** ಇವು ದಪ್ಪವಾಗಿದ್ದು, ಇದರ ಮಧ್ಯೆ ಅಲ್ಲಲ್ಲಿ ಗೀರುಗಳು ಇರುತ್ತವೆ. ಕೆಲವು ಸಲ ಬಳೆಗಳ ಮೇಲೆ ಹೂ, ಬಳ್ಳಿ, ಎಲೆ, ತಿರುಪು, ಸುರುಳಿ ಹೀಗೆ ಆಕಾರಗಳ ಅಚ್ಚಿನ ಗೀರುಗಳು ಇರಬಹುದು.

**೨. ಗಾಜಿನ ಬಳೆಗಳು:** ಇದರಲ್ಲೂ ಹಲವಾರು ಬಗೆಗಳಿವೆ. ರೇಷ್ಮೆಬಳೆ, ಚಿಕ್ಕಿಬಳೆ, ಗೀರಬಳೆ, ಸುರುಳಿಬಳೆ ಮುಂತಾದವು. ಸಾಮಾನ್ಯವಾಗಿ ಹೆಣ್ಣು ಮಕ್ಕಳು ಶುಭ ಸಮಾರಂಭಗಳ ಸಂದರ್ಭದಲ್ಲಿ ಹಸಿರು ಬಳೆಗಳನ್ನು ಹಾಕಿಕೊಳ್ಳುತ್ತಾರೆ. ಹಸಿರು ಬಳೆಗಳು ಸಮೃದ್ಧಿಯ ಸಂಕೇತುವೂ ಹೌದು ಎಂಬ ನಂಬಿಕೆ ನಮ್ಮ ಜನರಲ್ಲಿದೆ. ಆ ಕಾರಣಕ್ಕಾಗಿ ಶುಭ ಸಂದರ್ಭಗಳಲ್ಲಿ ಮಾತ್ರ ಇವುಗಳನ್ನು ಹೆಚ್ಚಾಗಿ ಬಳಸುತ್ತಾರೆ.

**೩. ರತ್ನದ ಬಳೆಗಳು:** ಇದನ್ನು ಬಂಗಾರದ ಬಳೆಯ ಮಧ್ಯದಲ್ಲಿ ಹವಳ, ಮುತ್ತು, ವಜ್ರ, ವೈಢೂರ್ಯ, ಮಾಣಿಕ್ಯ, ನೀಲ, ಪಚ್ಚೆಗಳನ್ನು ಬಳಸಿ ಇದನ್ನು ತಯಾರಿಸಲಾಗುತ್ತದೆ.

**೪. ಹರಳಿನ ಬಳೆಗಳು:** ಮಣ್ಣು, ಗಾಜು, ಬಂಗಾರದ ಬಳೆಗಳ ಮೇಲೆ ಬಣ್ಣ ಬಣ್ಣದ ಹರಳುಗಳನ್ನು ಜೋಡಿಸಿ ಹರಳಿನ ಬಳೆ ತಯಾರಿಸುವರು.

೮. ಮುಂದಲೆಯ ಆಭರಣ

**ತಲೆಯ ಮುಂಭಾಗ ಬೈತಲೆಯ ಎರಡು ಕಡೆಗೆ ಧರಿಸುವ ಆಭರಣಗಳು.**

**೧. ಚಂದ್ರಕೋಲು:** ಇದನ್ನು ಬಂಗಾರದಲ್ಲಿಯೇ ತಯಾರಿಸುವ ಆಭರಣವಾಗಿದೆ. ಇದು ಅರ್ಧಚಂದ್ರನ ಆಕಾರ ಹೊಂದಿರುವ ತಲೆ ಆಭರಣ. ಇದು ತಲೆಯ ಮುಂಭಾಗದಲ್ಲಿ ಬೈತಲೆಯ ಎರಡು ಕಡೆ ಇದನ್ನು ಹಾಕಿಕೊಳ್ಳುತ್ತಾರೆ. ಆಭರಣದ ಕೆಳಗೆ ಬಂಗಾರದ ಗುಂಡುಗಳು ಹಾಕಿರುತ್ತಾರೆ. ಇದು ಚಂದ್ರನ ಆರಾಧನೆಯ ಸಂಕೇತವಾಗಿ ಈ ಆಭರಣ ಅಸ್ತಿತ್ವಕ್ಕೆ ಬಂದಿದೆ ಎನ್ನಬಹುದು.

**೨. ಸೂರ್ಯ:** ಇದು ಉಬ್ಬು ಶಿಲ್ಪದ ರೀತಿಯ ಆಭರಣವಾಗಿದ್ದು, ಬೈತಲೆಯ ಒಂದು ಬದಿಗೆ ಚಂದ್ರಕೋಲು ಇನ್ನೊಂದು ಬದಿಗೆ ಸೂರ್ಯ ಆಭರಣಗಳನ್ನು ಹಾಕಿಕೊಳ್ಳುತ್ತಾರೆ. ಸೂರ್ಯನ ಸಂಕೇತವಾಗಿ ಕಿರಣಗಳನ್ನು ರೇಖೆಯಂತೆ ಗುರುತಿಸಿರುತ್ತಾರೆ.

**೯. ಮೂಗಿನ ಆಭರಣಗಳು:**

**೧. ಗಾಡೆ:** ಇದು ಮೂಗಿನ ಎಡ ಭಾಗಕ್ಕೆ ಎತ್ತರದಲ್ಲಿ ಹಾಕಿರುವ ರಂಧ್ರದಲ್ಲಿ ತೊಡುವ ಮೂಗಿನ ದೊಡ್ಡ ಆಭರಣ. ಇದು ಆಕಾರದಲ್ಲಿ ದೊಡ್ಡ ಗೋಡಂಬಿಯಂತೆ ಇರುತ್ತದೆ. ದೊಡ್ಡ ಮುತ್ತು ಹರಳುಗಳನ್ನು ಬಂಗಾರದ ತಗಡಿನಲ್ಲಿ ಮಾಡಿ ತಂತಿಯ ಸಹಾಯದಿಂದ ಮುತ್ತುಗಳನ್ನು ಸೇರಿಸಿರುತ್ತಾರೆ. ಇದು ಎಡ ಮೂಗಿನ ಮೇಲ್ಭಾಗದಿಂದ ತುಟಿಯವರೆಗೂ ಬರುವಂತಹದ್ದು. ಇದು ದೊಡ್ಡದಾದಂತಹ ಆಭರಣವಾಗಿದೆ. ಅದಕ್ಕಾಗಿಯೇ ಇದನ್ನು 'ಗಾಡೆ' ಎಂದು ಕರೆಯುವರು. ಮೂಗುತಿ ಸೌಭಾಗ್ಯದ ಚಿಹ್ನೆ ಎಂದು ಹೇಳಬಹುದು.

**೨. ಬುಲಾಕು:** ಇದು ಮೂಗಿನ ಹೊಳ್ಳೆಗಳ ಮಧ್ಯದ ಕೆಳತುದಿಯ ಚರ್ಮಕ್ಕೆ ರಂಧ್ರಗಳನ್ನು ಮಾಡಿ ಉಂಗುರಾಕಾರದ ಆಭರಣವನ್ನು ಧರಿಸುತ್ತಾರೆ. ಇದನ್ನು 'ಬುಲಾಕು' ಎಂದು ಕರೆಯುವರು. ಇದನ್ನು ಬಂಗಾರದಿಂದ ಮಾಡಲಾಗುತ್ತದೆ. ಈ ಆಭರಣದ ಬಳಕೆ ಲಂಬಾಣಿ ಸಮುದಾಯದಲ್ಲಿ ಇಂದಿಗೂ ಕಾಣಸಿಗುತ್ತದೆ.

**೩. ಬೇಸರಿ:** ಬೆಸ ಸಂಖ್ಯೆಯ ಹರಳುಗಳನ್ನು ಹೊಂದಿರುವ ಮೂಗುಬೊಟ್ಟನ್ನು ಬೇಸರಿ ಎನ್ನುತ್ತಾರೆ. ಇದು ಹರಳಿನ ಸುತ್ತ ಅರ್ಧ ಚಂದ್ರಕಾರದಲ್ಲಿ ನಾಲ್ಕು ಹರಳುಗಳನ್ನು ಜೋಡಿಸಲಾಗಿರುತ್ತದೆ.

**೪. ಮೂಗುತಿ:** ಮೂಗಿನ ರಂಧ್ರದಲ್ಲಿ ಹಾಕುವ ಕೊಂಡಿಯನ್ನು ಮೂಗುತಿ ಹೊಂದಿರುತ್ತದೆ. ಇದರಲ್ಲಿ ತೋರಮೂಗುತಿ, ಗೂಟ ಮೂಗುತಿ, ದೊಡ್ಡ ದೊಡ್ಡ ಮೂಗುತಿಯನ್ನು ನೋಡಬಹುದು. ಇದು ಒಡ್ಡ(ಬೋವಿ) ಜನಾಂಗದ ಮಹಿಳೆಯರಲ್ಲಿ 'ಗೂಟಿ ಮೂಗುತಿ' ಹೆಚ್ಚು ಬಳಕೆಯಲ್ಲಿದೆ.

**೫. ಮೂಗುಬೊಟ್ಟು:** ಮೂಗಿಗೆ ಧರಿಸುವ ದುಂಡನೆಯ ಆಕಾರದ ಚಿಕ್ಕ ಆಭರಣವೇ ಮೂಗುತಿ ಬಟ್ಟು. ಇದು ಬಂಗಾರ/ಬೆಳ್ಳಿಯಿಂದ ಸಿದ್ಧಪಡಿಸಿರುತ್ತಾರೆ. ಇದನ್ನು ಮುತ್ತು, ವಜ್ರ ಮತ್ತು ಬಣ್ಣ ಬಣ್ಣದ ಹರಳುಗಳಿಂದ ತಯಾರಿಸುತ್ತಾರೆ. ಹಾಗೆಯೇ ಮುತ್ತಿನ ಮೂಗುಬಟ್ಟು, ಹರಳಿನ ಮೂಗುಬಟ್ಟು, ವಜ್ರದ ಮೂಗಬಟ್ಟುಗಳೆಂದು ಹೆಸರುಗಳಿವೆ. ಜೊತೆಗೆ ಮೂಗುಬಟ್ಟಿನ ಆಕಾರದಿಂದಲೂ ಎಲೆ ಮೂಗುಬಟ್ಟು, ಮುತ್ತಿನ ಜೋಳದ ಬೊಟ್ಟು, ಅರೆ ಚಂದ್ರಬೊಟ್ಟು ಎಂತಲೂ ಬಳಕೆಯಲ್ಲಿದೆ.

**ಕಡಗ:** ಈ ಆಭರಣವನ್ನು ಬಂಗಾರ, ಬೆಳ್ಳಿ, ಕಂಚು, ತಾಮ್ರ, ಹಿತ್ತಾಳೆ ಮುಂತಾದ ಲೋಹಗಳಿಂದ ತಯಾರಿಸುವರು. ಗಾಜಿನ ಬಳೆಗಳ ಆಕಡೆ ಈ ಕಡೆ ಒಂದೊಂದಾದರು ಕಡಗ ಇರುತ್ತದೆ. ಕಡಗವನ್ನು ಹೆಚ್ಚು ಸುಂದರಗೊಳಿಸಲು ಮಧ್ಯೆ ಮುತ್ತು, ರತ್ನ, ಹವಳಗಳನ್ನು ಅಳವಡಿಸಿರುತ್ತಾರೆ. ಈಗ ಅದನ್ನು ಆಯಾ ವಸ್ತುಗಳ ಹೆಸರಿನಿಂದಲೇ ಕರೆಯಲಾಗುತ್ತದೆ. ಮುತ್ತಿನ ಕಡಗ, ಹವಳದ ಕಡಗ ಇತ್ಯಾದಿ.

**ತೋಡೆಗಳು:** ತೋಡೆಗಳನ್ನು ಬಂಗಾರ ಅಥವಾ ಬೆಳ್ಳಿಯಲ್ಲಿ ತಯಾರಿಸಲಾಗುತ್ತದೆ. ಅಲಂಕಾರಕ್ಕಾಗಿ ಮಧ್ಯೆ ಹರಳು ರತ್ನಗಳನ್ನು ಅಳವಡಿಸಿರುವುದೂ ಉಂಟು.

**ಗೋಟು:** ಕೈ ಬಳೆಗಳ ಅಕ್ಕ ಪಕ್ಕದಲ್ಲಿ ಧರಿಸುವ ಬಳೆಗಳಿಗೆ ಗೋಟು ಬಳೆಗಳೆಂದು ಹೆಸರು. ಇದನ್ನು ಬಂಗಾರ ಅಥವಾ ಬೇರೆ ಯಾವುದಾದರೂ ಲೋಹದಿಂದ ತಯಾರಿಸಿರುತ್ತಾರೆ.

**ಪಾಟ್ಲಿ:** ಕೈ ಬಳೆಗಳ ಹಿಂದೆ ಎರಡೂ ಕೈಗಳಿಗೆ ಪಾಟ್ಲಿಯನ್ನು ಧರಿಸುತ್ತಾರೆ. ಇದು ಬಂಗಾರದ ಬಳೆಯಾಗಿದ್ದು ಮೇಲುಭಾಗದಲ್ಲಿ ವಿವಿಧ ರೀತಿಯ ಸುಂದರ ಕೆತ್ತನೆಗಳಿಂದ ಕೂಡಿರುತ್ತದೆ.

**ಪೋಟೆ:** ಇದನ್ನು ಮುಂಗೈಗೆ ಧರಿಸುತ್ತಾರೆ. ಇದು ಬಂಗಾರದಲ್ಲಿಯೇ ರಚಿತವಾದ ವಿಶಿಷ್ಟ ಆಭರಣ. ಪೋಟೆಯ ಮುಂದಿನ ಭಾಗ ಪದಕದ ರಚನೆಯನ್ನು ಹೊಂದಿದ್ದು, ಕೈಗೆ ಬಂಧಿಸಲು ಬರುವಂತೆ ಸರಪಳಿ ಇರುತ್ತದೆ. ಆದಿಶೇಷನ, ವಿಷ್ಣುವಿನ, ಕೊರಳೂದುವ ಕೃಷ್ಣನ ಅಥವಾ ಹೂವಿನ ರಚನೆಯನ್ನು ಈ ಪದಕದಲ್ಲಿ ಕಾಣಬಹುದು. ಸುಂದರಗೊಳಿಸಲು ಬಣ್ಣದ ಹರಳು,

ರತ್ನ, ವಜ್ರದ ಮೂಗುಬಟ್ಟನ್ನು ದೊಡ್ಡ ವಜ್ರದಿಂದ ಹಾಗೇ ಚಿಕ್ಕ ಗಾತ್ರದ ಅನೇಕ ವಜ್ರಗಳನ್ನು ಸೇರಿಸಿ ಮೂಗುತಿಯನ್ನು ಮಾಡುತ್ತಾರೆ.

ಮುತ್ತಿನ ಜೋಳದಬೊಟ್ಟಿನಲ್ಲಿ ಮುತ್ತಿನ ಮೇಲ್ಭಾಗದ ಜೊತೆಗೆ ಅದರ ಕೆಳಗಡೆಯೂ ಮೂರು ಮುತ್ತನ್ನು ಜೋಡಿಸಿರುತ್ತಾರೆ. ಎಲೆಮೂಗಬಟ್ಟಿನಲ್ಲಿ ಎಲೆಯ ಆಕಾರ ಹೊಂದಿರುತ್ತದೆ. ಇದರಲ್ಲಿ ಮೂರು ಬಿಳಿ ಹರಳುಗಳು ಇರುತ್ತವೆ 'ಮಿಂಚು' ಎಂಬ ಮೂಗಬಟ್ಟಿನಲ್ಲಿ ವಜ್ರ ಅಥವಾ ಹೊಳಪುಳ್ಳ ಹರಳನ್ನು ಸೇರಿಸಿರುತ್ತಾರೆ. ಹಾಗೇ ಬಂಗಾರದ ಕೆತ್ತನೆಯನ್ನು ಮಾಡಿರುತ್ತಾರೆ.

**೬. ನತ್ತು:** ಇದು ಮೂಗಿನ ಎಡಭಾಗದಲ್ಲಿ ಶೋಭಿಸುವ ಆಭರಣ. ಇದು ಉಂಗುರಾಕಾರದಲ್ಲಿರುತ್ತದೆ. ಇದನ್ನು ಬಣ್ಣ ಬಣ್ಣದ ಹರಳು, ಮುತ್ತುಗಳನ್ನು ಜೋಡಿಸಿ ಸುಂದರವಾದ ನತ್ತುಗಳಿಂದಲೂ ತಯಾರಿಸಲಾಗುತ್ತದೆ.

**೧೦. ಸೊಂಟದ ಆಭರಣಗಳು**

**೧. ಒಡ್ಯಾಣ:** ಸೊಂಟಕ್ಕೆ ಹಾಕಿಕೊಳ್ಳುವ ಒಂದು ಆಭರಣ. ಇದನ್ನು ಬೆಳ್ಳಿ, ಬಂಗಾರ ಅಥವಾ ಮಿಶ್ರಬೆಳ್ಳಿಯಲ್ಲಿ ಮಾಡುತ್ತಾರೆ. ಸದಾ ಸೊಂಟದ ಪಟ್ಟಿಯನ್ನು ಹಳ್ಳಿಗಳಲ್ಲಿ ಕೆಲವರು ಧರಿಸುತ್ತಾರೆ. ಆದರೆ ಡಾಬು, ಒಡ್ಯಾಣಗಳನ್ನು ವಿಶೇಷ ದಿನಗಳಲ್ಲಿ ಮಾತ್ರ ಹಾಕಿಕೊಳ್ಳುವುದನ್ನು ನೋಡುತ್ತೇವೆ. ಎಪ್ಪತ್ತರ ದಶಕಕ್ಕೂ ಹಿಂದೆ ಕೆಲವು ಸ್ಥಿತಿವಂತರು ಈ ಒಡ್ಯಾಣವನ್ನು ದಿನನಿತ್ಯ ಬಳಸುತ್ತಿದ್ದುದು ಕಂಡುಬರುತ್ತದೆ.

**೨. ಡಾಬು:** ಇದನ್ನು ಬೆಳ್ಳಿ, ಬಂಗಾರಗಳಲ್ಲಿ ತಯಾರಿಸುತ್ತಾರೆ. ಹಾಗೇ ಅವುಗಳ ಮೇಲೆ ವಜ್ರ, ಹರಳುಗಳನ್ನು ಕೆತ್ತಿಸಲಾಗುತ್ತದೆ.

**೩. ಸೊಂಟದ ಪಟ್ಟಿ:** ಇದರಲ್ಲಿ ಹಲವಾರು ಬಗೆಗಳಿವೆ. ಬೆಳ್ಳಿ, ಬಂಗಾರ ಅಥವಾ ಮಿಶ್ರಲೋಹದಲ್ಲಿ ರಚಿಸಲ್ಪಟ್ಟಿರುತ್ತಾರೆ. ಸೊಂಟದ ಪಟ್ಟಿಗೆ ಕೆಳಗಡೆ ಗೆಜ್ಜೆಗಳನ್ನು ಜೋಡಿಸಿದರೆ ಅದೇ ಗೆಜ್ಜೆಪಟ್ಟಿಯಾಗುತ್ತದೆ.

**೧೧. ಹಿಂದಲೆಯ ಆಭರಣಗಳು**

**೧. ಕೇದಿಗೆ:** ಇದನ್ನು ಮುಡಿಯೊಳಗೆ ಅಥವಾ ಮುಡಿಯ ಮೇಲ್ಗಡೆ ಧರಿಸುವರು. ಇದಕ್ಕೆ ಕೇದಿಗೆ, ಅಡ್ಡ ಕೇದಿಗೆ, ಕೇದಿಗೆ ಗರಿ, ಕೇದಿಗೆ ಹೂ ಎಂಬ ಹೆಸರುಗಳಿವೆ. ಹಾಗೇ ಬಂಗಾರದ ಕೇದಿಗೆಗಳನ್ನು ವಿಶಿಷ್ಟ ರೀತಿಯಲ್ಲಿ ತಯಾರಿಸಿ ಹಾಕಿಕೊಳ್ಳುತ್ತಾರೆ. ಇದು ಜನಪ್ರಿಯವಾದ ಹಿಂತಲೆಯ ಆಭರಣವಾಗಿದೆ.

೨. **ಮೊಗ್ಗಿನ ಮಾಲೆ:** ಬಂಗಾರದಲ್ಲಿ ಮಲ್ಲಿಗೆ ಮೊಗ್ಗಿನ ಆಕಾರದಲ್ಲಿ ಮಾಡಿ ತುರುಬಿಗೆ ಹೊಂದಿಕೆಯಾಗುವಂತೆ ಅರ್ಧಚಂದ್ರಾಕೃತಿಯಲ್ಲಿ ಹಾಕಿಕೊಳ್ಳುತ್ತಾರೆ. ಇದು ಸಾಮಾನ್ಯವಾಗಿ ಎರಡು ಸಾಲು ಬಂಗಾರದ ಗುಂಡುಗಳ ಮೇಲೆ ಮೂರು ಸಾಲು ಹೆಣೆದ ಮಲ್ಲಿಗೆ ಮೊಗ್ಗುಗಳು ಇರುತ್ತವೆ.

**೩.೨. ಪುರುಷರು ಧರಿಸುವ ಆಭರಣಗಳು**

ಮಹಿಳೆಯರ ಹಾಗೆಯೇ ಪುರುಷರು ಸಹ ಆಭರಣಗಳನ್ನು ಹಾಕಿಕೊಳ್ಳುತ್ತಿದ್ದರು. ಅಂತಹ ಕೆಲವು ಆಭರಣಗಳನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

**೧. ಕಾಲಿನಾಭರಣಗಳು**

ಕಾಲ್ಕಡಗ, ತೋಡೆ, ಅಂದುಗೆ, ಪೆಂಡೆ ಇವುಗಳನ್ನು ಪುರುಷರು ಕಾಲಿಗೆ ಧರಿಸುತ್ತಿರುವುದನ್ನು ಗುರುತಿಸಬಹುದಾಗಿದೆ.

**೨. ಕಿವಿಯಾಭರಣಗಳು**

೧. **ಒಂಟಿ:** ಮಗು ಹುಟ್ಟಿದಾಗ ಮುರುವನ್ನು ಹಾಕುತ್ತಾರೆ. ಸ್ವಲ್ಪ ಬೆಳೆದ ನಂತರ ಒಂಟಿಯನ್ನು ಹಾಕುವರು. ಇದರಲ್ಲಿ ಮುತ್ತು ಮತ್ತು ಹರಳುಗಳನ್ನು ಜೋಡಿಸಿ ತಯಾರಿಸಲಾಗುತ್ತದೆ. ಇದು ಹೆಚ್ಚು ಸುಂದರವಾಗಿ ಕಾಣುತ್ತದೆ. ಕೆಲವೊಂದು ಬುಡಕಟ್ಟುಗಳಲ್ಲಿ ತಂದೆ-ತಾಯಿಗಳಿಲ್ಲದ ಮಕ್ಕಳು ಒಂಟಿ ಧರಿಸುತ್ತಾರೆ. ಅಂದರೆ ಒಂಟಿ ಆಭರಣ ಧರಿಸಿದ ವ್ಯಕ್ತಿಗೆ ತಂದೆ-ತಾಯಿ ಜೀವಂತವಾಗಿಲ್ಲ ಎಂಬುದನ್ನು ಸಂಕೇತಿಸುತ್ತದೆ.

೨. **ಕಡಕು:** ಮುರು, ಒಂಟಿಗಳ ಬದಲಾಗಿ ಕೆಲವರು ಕಡಕನ್ನು ಧರಿಸುವರು. ಇದರಲ್ಲಿ ಮುತ್ತು, ಹರಳುಗಳನ್ನು ಅಳವಡಿಸುತ್ತಾರೆ. ಇದಕ್ಕೆ ಅಂದರೆ ಕಡಕಿಗೆ ತಿರುಪು ಇರುವುದಿಲ್ಲ. ಆದಕ್ಕಾಗಿ ಇದು ಕಿವಿಗೆ ಹತ್ತಿಕೊಳ್ಳುವುದಕ್ಕೆ ತಂತಿಯಿಂದಲೇ ಮುರುವಿನಂತೆ ಕೊಂಡಿ ಮಾಡಿ ತಿರುಚಿ ಧರಿಸುವರು.

೩. **ಕುಂಡಲ:** ಇದನ್ನು ಚಿಕ್ಕದಾದ ಸರಪಳಿಗೆ ದಪ್ಪ ಮುತ್ತು, ಗುಂಡು, ರತ್ನಗಳನ್ನು ಸೇರಿಸಿ ಕುಂಡಲಗಳನ್ನು ಮಾಡುತ್ತಾರೆ. ಇದರಲ್ಲಿ ಹಲವಾರು ಆಕಾರಳಿವೆ. ನಾಗಮುಂಡಲ, ಮಣಿಮುಂಡಲ, ನಕ್ಷತ್ರಮಂಡಲ, ಪತ್ರಕುಂಡಲ, ರತ್ನಕುಂಡಲ ಮುಂತಾದ ಹೆಸರುಗಳಿವೆ.

೪. **ಬಾವುಲಿ:** ಇದು ಕಿವಿಯ ಒಂದು ಮಗ್ಗುಲಿಗೆ ಮುಟಕ್ಕೆ ಹೊಂದಿಕೊಂಡಿರುವ ಕಿವಿಯ ಸಣ್ಣ ಭಾಗಕ್ಕೆ ಇದನ್ನು ಧರಿಸುವರು. ಇದನ್ನು ವಿಶೇಷವಾಗಿ ಬಲಗಿವಿಗೆ ಧರಿಸುತ್ತಾರೆ. ಇದರಲ್ಲಿ

ಮುತ್ತು, ಹರಳುಗಳನ್ನು ಕೆತ್ತಿಸಿರುತ್ತಾರೆ. ಇದರಲ್ಲಿ ಗುಬ್ಬಿಬಾವುಲಿ, ಗೊಂಚಿನಬಾವುಲಿ, ಬುರುಗಿನ ಬಾವುಲಿ, ಚಂದ್ರಬಾವುಲಿ ಎಂಬ ಹಲವು ಪ್ರಕಾರಗಳಿವೆ.

೫. **ಮುರುವು:** ಚಿಕ್ಕ ಮಗುವಿರುವಾಗ 'ಮರುವನ್ನು' ಹಾಕುತ್ತಾರೆ. ಇದಕ್ಕೆ 'ಹುಟ್ಟುರುವು' ಎಂತಲೂ ಕರೆಯುತ್ತಾರೆ. ಮುರುವಿನ ಜೊತೆಗೆ ಕಿವಿಯ ಮೇಲ್ಭಾಗದಲ್ಲಿ ಮೇಲ್ ಮುರುವು ಎಂಬ ಆಭರಣವನ್ನು ಸಹ ತೊಡುವುದುಂಟು. ಇದರಲ್ಲಿ ಚೌಕಳಿ ಮುರುವು, ತೊಟ್ಟುಮುರುವು, ಮುತ್ತಿನಮುರುವು, ಸಿಂಹ ಮೆಟ್ಟಿನ ಮುರುವು ಎಂಬ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಚೌಕಳಿ ಮರುವನ್ನು ಮಾತ್ರ ಎರಡೂ ಕಿವಿಗೂ ತೊಡುತ್ತಾರೆ.

**೩. ಕೊರಳ ಆಭರಣಗಳು**

ಮಹಿಳೆಯರಂತೆ ಕೊರಳ ಆಭರಣಗಳನ್ನು ಪುರುಷರು ಸಹ ಧರಿಸುತ್ತಿದ್ದು ಆಭರಣದ ಗಾತ್ರ ಮಾತ್ರ ಸ್ವಲ್ಪ ದೊಡ್ಡದಾಗಿರುತ್ತದೆ. ಕಂಠಿಸರ, ಗೋಪು, ಗುಂಡಿನಸರ, ಪವನಸರ, ಚಪಲ ಹಾರ, ಕಡ್ಡಿಸರ, ಗೋಪು, ಅಸಲಿ ಮುಂತಾದವುಗಳನ್ನು ಧರಿಸುತ್ತಿದ್ದರು. ಇವುಗಳನ್ನು ವಿಶೇಷ ಸಂದರ್ಭಗಳಲ್ಲಿ ಮಾತ್ರ ಬಳಸುತ್ತಿದ್ದರು.

**೪. ತೋಳಿನ ಆಭರಣಗಳು**

ಮೊದಲು ಪುರುಷರು ತೋಳ್ಬಳೆ, ಬಾಹುಬಂದ, ಕೇಯೂರ, ಬಾಪುಲಿ ಮೊದಲಾದವುಗಳನ್ನು ಧರಿಸುತ್ತಿದ್ದರೆಂದು ಹೇಳುತ್ತಾರೆ.

**೫. ಕೈ ಬೆರಳಿನ ಆಭರಣಗಳು**

ಪುರುಷರು ಹತ್ತು ಬೆರಳುಗಳಿಗೆ ಹತ್ತು ಉಂಗುರಗಳನ್ನು ಹಾಕಿಕೊಳ್ಳುವುದನ್ನು ನೋಡಬಹುದು. ಉಂಗುರಗಳಲ್ಲಿ ಮುತ್ತು, ವಜ್ರ, ನವರತ್ನಗಳನ್ನು ಬಳಸಿ ಉಂಗುರ ಮಾಡಿಸುತ್ತಿದ್ದರು. ಕೆಲವರು ಮುದ್ರೆ ಉಂಗುರುಗಳನ್ನು ಸಹ ಧರಿಸುತ್ತಿದ್ದರು.

**೬. ಮುಂಗೈ ಆಭರಣಗಳು**

ಹಿಂದೆ ಪುರುಷರು ಕಡಗ, ತೋಡೆ, ಕಂಕಣ, ಬಿಂದ್ಲಿ, ಕಪ್ಪ, ಪೋಚೆ ಮುಂತಾದವುಗಳನ್ನು ಹಾಕಿಕೊಳ್ಳುತ್ತಿದ್ದರು.

೧. **ಕಪ್ಪ:** ಇದನ್ನು ಪುರುಷರು ಬಲಗೈಗೆ ಮಾತ್ರ ಕಾಕಿಕೊಳ್ಳುತ್ತಿದ್ದರು.

೨. **ಪೋಚೆ:** ಪುರುಷರು ಬಲಗೈಗೆ ಬಂಗಾರದಿಂದ ತಯಾರಿಸಿದ ರತ್ನಖಚಿತವಾದ ಸುಂದರವಾಗಿ ಮಾಡಿರುವ ಪೋಚೆಯನ್ನು ಕಾಕಿಕೊಳ್ಳುತ್ತಿದ್ದರು. ಹಾಗೆಯೇ ಬೆಳ್ಳಿ, ತಾಮ್ರ, ಕಂಚುಗಳಲ್ಲಿ ತಯಾರಿಸಿದ ಕಡಗ, ತೋಡೆಗಳನ್ನು ಧರಿಸುತ್ತಿದ್ದರು.

೭. ಸೊಂಟಾಭರಣಗಳು

ಗಂಡಸರು ಉಡುದಾರ, ನೇವಳ ಹಾಕಿಕೊಳ್ಳುತ್ತಾರೆ. ದುಷ್ಟಶಕ್ತಿಗಳಿಂದ ರಕ್ಷಿಸುತ್ತದೆ ಎಂಬ ನಂಬಿಕೆ ಇರುವುದರಿಂದ ಉಡುದಾರವನ್ನು ಧರಿಸುತ್ತಿದ್ದರು. ಇದರಲ್ಲಿ ಮಾಗಾಯಿ, ತನಿಮಣಿ, ಗಜಗನಾಯಿಕಾಸು ಇತ್ಯಾದಿ ವಸ್ತುಗಳನ್ನು ಪೋಣಿಸಿ ಕಟ್ಟಿಕೊಳ್ಳುತ್ತಿದ್ದರು.

೩.೩. ಮಕ್ಕಳು ಧರಿಸುವ ಆಭರಣಗಳು

ಮಕ್ಕಳು ಆಭರಣಗಳನ್ನು ಸೌಂದರ್ಯಕ್ಕಾಗಿ ಅಥವಾ ಗೌರವ ಪ್ರತಿಷ್ಠೆಯ ಸಂಕೇತವಾಗಿ ಹಾಕಿಕೊಳ್ಳುವುದಕ್ಕಿಂತ ಮುಂಚೆ ದುಷ್ಟಶಕ್ತಿಗಳ ದೃಷ್ಟಿ ತಾಗಬಾರದೆಂಬ ನಂಬಿಕೆ ಇವರದ್ದಾಗಿತ್ತು. ರೋಗ ಬರಬಾರದೆಂದು ಮಕ್ಕಳಿಗೆ ಆಭರಣಗಳನ್ನು ಹಾಕುತ್ತಿದ್ದರು. ಆದರೆ ಕಾಲ ಬದಲಾದಂತೆ ಎಲ್ಲಾ ದೃಷ್ಟಿಯಿಂದಲೂ ಮಕ್ಕಳಿಗೆ ಆಭರಣಗಳನ್ನು ಹಾಕುತ್ತಿದ್ದಾರೆ.

೧. **ಕಾಲಿನ ಆಭರಣ:** ಚಿಕ್ಕ ಮಕ್ಕಳಿಗೆ ಕಾಲಿಗೆ ಕಡಗ ಹಾಕುತ್ತಿದ್ದರು. ಅದು ಬೆಳ್ಳಿಯದ್ದಾಗಿರುತ್ತದೆ. ಅದನ್ನು ಹಾಲ್ಗಡಗ ಎಂದು ಕರೆಯುತ್ತಾರೆ. ಮಕ್ಕಳಿಗೆ ಹಾಕುವ ಕಡಗ, ಗೆಜ್ಜೆಹಾಲ್ಗಡಗ, ಪೆಂಡೆಗೆಜ್ಜೆ ಹಾಕುತ್ತಾರೆ. ಗೆಜ್ಜೆಪಾಡಗ, ಗೆಜ್ಜೆಹಾಲ್ಗಡಗ, ಪೆಂಡೆಗೆಜ್ಜೆ ಹೆಸರುಗಳಲ್ಲಿ ಮಗುವಿನ ಕಾಲಿನಾಭರಣ ನಿನಾದಗೊಳ್ಳುತ್ತದೆ.

೨. **ಕಿವಿಯ ಆಭರಣ:** ಚಿಕ್ಕ ಮಕ್ಕಳಾದ ಗಂಡು, ಹೆಣ್ಣು ಇಬ್ಬರಿಗೂ ಮುರುವು ಹಾಕುತ್ತಾರೆ. ಇದು ಬೆಳ್ಳಿ, ಬಂಗಾರ, ತಾಮ್ರ ಅಥವಾ ಪಂಚಲೋಹದಿಂದ ಮಾಡಿಸಿ ಹಾಕುತ್ತಿದ್ದರು. ಮುರುವಿನಲ್ಲಿ ಕೆಲವೊಮ್ಮೆ ಮುತ್ತು, ಹವಳ ಅಥವಾ ಹೊಳಪುಳ್ಳ ಮಣಿಗಳನ್ನು ಸೇರಿಸಿ ಮಾಡಿರುತ್ತಾರೆ. ಎಲೆ, ನಕ್ಷತ್ರ, ಚಂದ್ರನಾಕಾರದ ಸಣ್ಣ ಪದಕ ತಯಾರಿಸಿ ಮುರುವಿನಲ್ಲಿ ಪೋಣಿಸಿ ಮಕ್ಕಳಿಗೆ ಹಾಕುತ್ತಾರೆ.

೩. **ಕೈ ಆಭರಣಗಳು:**

೧. **ಕಪ್ಪ:** ಇದನ್ನು ಬೆಳ್ಳಿ ಅಥವಾ ಬಂಗಾರದ ಎಳೆಗಳನ್ನು ನುಲಿದು ಕಪ್ಪನ್ನು ತಯಾರಿಸುತ್ತಾರೆ. ಇದಕ್ಕೆ ಕೊಂಡಿಯನ್ನು ಅಳವಡಿಸಿದ್ದರೆ ಕೊಂಡಿಕಪ್ಪ ಎಂದು ಕರೆಯುವರು.

೨. **ಕೈ ಕಟ್ಟು:** ಇದನ್ನು ಮಣಿ ಅಥವಾ ಬೆಳ್ಳಿ, ಬಂಗಾರದ ಗುಂಡುಗಳನ್ನು ನೂಲಿನಲ್ಲಿ ಅಥವಾ ತಂತಿಯಲ್ಲಿ ಪೋಣಿಸಿ ಕೈ ಕಟ್ಟನ್ನು ತಯರಿಸುವರು. ಕೆಲವೊಂದು ಬಾರಿ ಮುತ್ತು, ಹರಳ, ಕರಿಮಣಿಗಳನ್ನು ಬಳಸಿ ಮಕ್ಕಳ ಕೈ ಕಟ್ಟುಗಳನ್ನು ತಯಾರಿಸಲಾಗುತ್ತದೆ.

೩. **ಮುಂಗೈ ಆಭರಣಗಳು:** ಚಿಕ್ಕ ಮಕ್ಕಳಿಗೆ ದೃಷ್ಟಿತಾಗಬಾರದೆಂದು ಮುಂಗೈ ಸರಿಯಾಗಿ ಬೆಳೆಯಲೆಂದು ಮಕ್ಕಳಿಗೆ ಹಾಲ್ಬಳ್ಳಿ ಮತ್ತಿತರ ಬೇರುಗಳಿಂದ ತಯಾರಿಸಿದ ಕುರಿಉಣ್ಣೆಯಿಂದ ತಯಾರಿಸಿದ ಕಡಗಗಳು ಕಪ್ಪುದಾರ, ಕರಿಮಣಿ ಕಟ್ಟುಗಳನ್ನು ಹಾಕುತ್ತಾರೆ.

**೪. ಕೈ ಬೆರಳಿನಾಭರಣ:** ಮಕ್ಕಳಿಗೆ ಮೊದಲು ಬೆಳ್ಳಿ ಉಂಗುರ ಹಾಕಿ ನಂತರ ಬಂಗಾರದ ಉಂಗುರ ಹಾಕುವರು. ಏಕೆಂದರೆ ಬೆಳ್ಳಿ ದೇಹಕ್ಕೆ ಹಿತವೆಂಬ ಕಲ್ಪನೆ ಇದೆ. ಅದಕ್ಕಾಗಿ ಮೊದಲು ಬೆಳ್ಳಿಯ ಆಭರಣವನ್ನೇ ಹಾಕುತ್ತಿದ್ದರು.

**೫. ಕೊರಳ ಆಭರಣಗಳು**

**೧. ದಿಟ್ಟಿಮಣಿ ಸರ:** ಕಣ್ಣಿಗೆ ದುಷ್ಟಶಕ್ತಿಗಳಿಂದ ಮಕ್ಕಳನ್ನು ಕಾಪಾಡಲು ದಿಟ್ಟಿಮಣಿ ಸರವನ್ನು ಹಾಕುತ್ತಾರೆ. ಇದನ್ನು ಹವಳ, ಗಜ್ಜುಗ, ಹುಲಿಯುಗುರು, ತಾಳಿ, ಕಾಯಿ, ಬಾಲಿಮಣಿ, ನಾಮದಮಣಿ, ತಟ್ಟುಮಣಿ, ತಾಮ್ರದ ತೂತಿನ ಬಿಲ್ಲೆ ಇವುಗಳನ್ನು ಪೋಣಿಸಿ ಮಗುವಿನ ಕೊರಳಿಗೆ ಹಾಕುತ್ತಿದ್ದರು.

**೨. ಹವಳದ ಸರ:** ದೊಡ್ಡ ದೊಡ್ಡ ಹವಳಗಳನ್ನು ಬೇರೆ ಬೇರೆ ಮಾಡಿ ಅಥವಾ ಬೇರೆ ಮಣಿಗಳೊಂದಿಗೆ ಸೇರಿಸಿ ಮಗುವಿನ ಕೊರಳಿಗೆ ಹಾಕುತ್ತಿದ್ದರು. ಹವಳ ಧರಿಸುವುದರಿಂದ ಮಕ್ಕಳ ಮೈಕಾಂತಿ ಹೆಚ್ಚುತ್ತದೆ ಹಾಗೂ ಮಕ್ಕಳ ಆಯಷ್ಯ ವೃದ್ಧಿಸುತ್ತದೆ ಎಂಬ ನಂಬಿಕೆ ಇದೆ.

**೬. ಸೊಂಟದ ಆಭರಣಗಳು**

ಚಿಕ್ಕಂದಿನಲ್ಲಿ ಉಡುದಾರವನ್ನು ಗಂಡು ಮತ್ತು ಹೆಣ್ಣು ಮಕ್ಕಳಿಬ್ಬರಿಗೂ ಕಟ್ಟುತ್ತಾರೆ. ಉಡುದಾರ ಕಟ್ಟುವುದರಿಂದ ದುಷ್ಟಶಕ್ತಿಗಳು ಮಕ್ಕಳ ಬಳಿ ಸುಳಿಯುವುದಿಲ್ಲ ಎಂಬ ನಂಬಿಕೆ ಇರುವುದರಿಂದ ಜನಿಸಿದ ಮಕ್ಕಳು ಗಂಡು ಹೆಣ್ಣೆಂದು ಬೇದವಿಲ್ಲದೆ ಉಡುದಾರವನ್ನು ಕಟ್ಟುತ್ತಿದ್ದರು. ಉಡುದಾರದಲ್ಲಿ ಹುಲಿಯುಗುರು ಅಥವಾ ಗಜ್ಜಗ, ದಿಟ್ಟಮಣಿಯನ್ನು ಪೋಣಿಸಿ ಕಟ್ಟುತ್ತಾರೆ. ಗಂಡು ಮಕ್ಕಳಾದರೆ ಮಾಗಾಯಿಯನ್ನು ಪೋಣಿಸಿ, ಹೆಣ್ಣು ಮಕ್ಕಳಾದರೆ ಬಂಗಾರದಲ್ಲಿ ಮಾಡಿದ ಅರಳೆಲೆಯಲ್ಲಿ ಪೋಣಿಸಿ ಅಲಂಕರಿಸುವರು. ಉಡುದಾರದಲ್ಲಿ ಪಟ್ಟಿ ಉಡುದಾರ, ಕಾಯಿ ಉಡುದಾರ, ಗೆಜ್ಜೆ ಉಡುದಾರ, ರನ್ನಬಲೆ ಎಂಬ ವಿವಿಧ ಬಗೆಯ ಉಡುದಾರಗಳಿವೆ.

ಆಭರಣಗಳ ಕಲ್ಪನೆ ಪ್ರಾಚೀನ ಕಾಲದಲ್ಲಿ ಇರುವುದನ್ನು ನೋಡುತ್ತೇವೆ. ಮೊದಲು ಎಲೆ, ಹೂವು, ಬಳ್ಳಿ ಸುತ್ತಮುತ್ತಲಿನ ಪರಿಸರದಲ್ಲಿ ಸಿಗುಂತಹದ್ದರಿಂದಲೇ ದೇಹಕ್ಕೆ ಹಾಕಿಕೊಳ್ಳುತ್ತಿದ್ದರು. ನಂತರ ಕಾಲ ಬದಲಾದಂತೆ ಬಂಗಾರ, ಬೆಳ್ಳಿ, ತಾಮ್ರ ಹೀಗೆ ಬದಲಾವಣೆ ಹೊಂದುವುದು ಕಂಡುಬರುತ್ತದೆ.

ಮನುಷ್ಯನು ಮುಂದೆ ಇದರಿಂದ ಅಲಂಕಾರ ಪ್ರಿಯನಾದನು. ತನಗೆ ಬೇಕಾದಂತಹ ಹೊಸ ಹೊಸ ಮಾದರಿಯಲ್ಲಿ ಆಭರಣಗಳನ್ನು ಹಾಕಿಕೊಳ್ಳಲು ಮುಂದಾದನು. ಮೊದಲು

ಹಳೆಯ ಪದ್ಧತಿಯಲ್ಲಿದ್ದಂತಹ ಆಭರಣಗಳನ್ನು ಬಿಟ್ಟು ಹೊಸ ಮಾದರಿಯ ಸಮಾಜಕ್ಕೆ ತಕ್ಕಂತೆ ಒಡವೆಗಳಲ್ಲಿ ಬದಲಾವಣೆಗಳು ಕಂಡು ಬಂದವು.

ನಾವು ಧರಿಸುವ ಎಲ್ಲಾ ಆಭರಣಗಳಲ್ಲಿ ಹಲವಾರು ವಿಧವಾದಂತಹ ಆಭರಣಗಳು ಕಂಡು ಬರುತ್ತವೆ. ಬಳೆ, ಓಲೆ, ಜುಮುಕಿ, ನತ್ತು, ಕಾಲುಂಗುರ, ಡಾಬು ಹೀಗೆ ಹಲವಾರು ಆಭರಣಗಳಲ್ಲಿ ಅದು ತನ್ನದೇ ಆದ ಹೊಸ ಮಾದರಿಯ ಛಾಪನ್ನು ಮೂಡುತ್ತಿವೆ. ಬಳೆಗಳಲ್ಲಿಯೇ ಬಂಗಾರದ, ಮುತ್ತಿನ, ಗುಂಡಿನ, ಹೂವಿನ, ಹರಳಿನ ಹೀಗೆ ಹಲವಾರು ರೀತಿಯ ಹೆಸರುಗಳಿಂದ ಕರೆಯುವುದು ತಿಳಿದುಬರುತ್ತದೆ. ಕೊರಳಿನ ಆಭರಣಗಳಲ್ಲಿ ಜೋಮಾಲೆಸರ, ಗುಂಡಿನಸರ, ಅವಲಕ್ಕಿ ಸರ, ನೆಲ್ಲಿಕಾಯಿ ಸರ, ಮಾವಿನಕಾಯಿ ಸರ ಹೀಗೆ ಅದರ ಒಂದು ಹೋಲಿಕೆಯನ್ನು ಹೊಂದಿರುವ ಸರ ಎಂದು ಇವುಗಳನ್ನು ಹೇಳಬಹುದಾಗಿದೆ. ಹಾಗೆ ಉಂಗುರಗಳಲ್ಲೂ ಸುತ್ತಾಲುಂಗುರ, ಸುರುಳಿ ಉಂಗುರ, ಗೆಜ್ಜೆ ಉಂಗುರ, ಹರಳಿನುಂಗುರ ಹಾಗೆ ಹರಳಿನ ಮೂಗುತಿ, ಮುತ್ತಿನ ಮೂಗುತಿ ಹೀಗೆ ವಿಭಿನ್ನ ಭಿನ್ನತೆಯನ್ನು ನೋಡುತ್ತೇವೆ. ಹಾಗೆ ನವರತ್ನ ಹಾರ, ಸೂರ್ಯ ಹಾರ, ಜುಮುಕಿ ಹಾರ, ಡಾಬು, ಪದಕ ಹೀಗೆ ಎಲ್ಲಾ ರೀತಿಯ ತೊಡುಗೆಗಳಲ್ಲಿ ಹಲವಾರು ಪ್ರಕಾರದ ಆಭರಣಗಳನ್ನು ಬಳಸುವುದನ್ನು ಕಾಣುತ್ತೇವೆ.

ಇವು ಮೊದಲು ಇದ್ದರೂ ಕಾಲ ಬದಲಾದಂತೆ ಜನರು ಅದರಲ್ಲಿ ಹೊಸ ಹೊಸ ಮಾದರಿಯಲ್ಲಿ ಅದರ ಬದಲಾವಣೆಗೆ ಕಾರಣರಾಗಿದ್ದಾರೆ. ಹಳೆಯ ಮಾದರಿಗಳನ್ನು ತೊರೆದು ಹೊಸ ಮಾದರಿಯ ಆಭರಣಗಳನ್ನು ಸೃಷ್ಟಿಸುವುದು ತಿಳಿಯಬಹುದಾಗಿದೆ. ಹೀಗೆ ಅದರ ಆಕಾರ, ವಿನ್ಯಾಸದಲ್ಲಿ ಬದಲಾವಣೆಯಾಗಿದೆ. ಸ್ವರೂಪ ಬಂಗಾರದ್ದೇ ಆಗಿದ್ದರೂ ಅದರ ಶೈಲಿಯಲ್ಲಿ, ಆಕಾರದಲ್ಲಿ ಹೊಸ ಮಾದರಿಯ ಆಭರಣಗಳು ಬಳಕೆಗೆ ಬಂದಿವೆ.

ಇಲ್ಲಿ ಆಭರಣಗಳ ಹೆಸರುಗಳಲ್ಲಿ ಉತ್ತರ ಕರ್ನಾಟಕದ ಆಭರಣಗಳು ಹಾಗೂ ಧರ್ಮ, ಜಾತಿಗಳಿಗನುಗುಣವಾದಂತಹ ಆಭರಣಗಳ ಪಟ್ಟಿಯನ್ನು ಮಾಡಲಾಗಿದೆ. ಹಾಗೆ ಮೈಸೂರು ಭಾಗದಲ್ಲಿ ಧರಿಸುವಂತಹ/ಹಾಕಿಕೊಳ್ಳುವಂತಹ ಆಭರಣಗಳನ್ನು ಸಹ ಇಲ್ಲಿ ತಿಳಿಸಲಾಗಿದೆ. ಹೀಗೆ ಆಭರಣಗಳ ಪಟ್ಟಿ, ಧರಿಸುವ ಮಾಹಿತಿ ಹಾಗೂ ಆಯಾ ಕಾಲಕ್ಕೆ ತಕ್ಕಂತೆ ಬದಲಾವಣೆಯಾಗಿರುವ ಕುರಿತು ಮಾಹಿತಿಯನ್ನು ತಿಳಿಯಬಹುದಾಗಿದೆ.

ಹಳೆಯ ಆಭರಣಗಳು ಕಾಲ ಬದಲಾದಂತೆ ಬದಲಾವಣೆಯೊಂದುತ್ತಲಿವೆ. ಏಕೆಂದರೆ ಹೊಸ ಹೊಸ ಮಾದರಿಯ ಆಭರಣಗಳ ವಿನ್ಯಾಸಗಳು ಮಾರುಕಟ್ಟೆಗೆ ಬರುತ್ತಿರುವುದರಿಂದ ಜನರು ಅವುಗಳ ಆಕರ್ಷಣೆಗಳಿಗೆ ಮಾರು ಹೋಗುತ್ತಿದ್ದಾರೆ. ಅಷ್ಟೇ ಅಲ್ಲ ಹಳೆ ಮಾದರಿಯ ಆಭರಣಗಳುನ್ನು ಹೊಸ ಮಾದರಿಯ ವಿನ್ಯಾಸಕ್ಕೆ ಒಳಪಡಿಸಿ ಧರಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ.

ಇದರಲ್ಲಿ ಸರ, ಹಾರ, ಪದಕ ಹೀಗೆ ಆಭರಣಗಳು ಇವು ವಸ್ತುಗಳನ್ನು ಕುರಿತು ಪರಿಸರ ನಿಸರ್ಗಕ್ಕೆ ಹೊಂದಿರುವ ಹೆಸರುಗಳನ್ನು ಆಭರಣಗಳಿಗೆ ಸೂಚಿಸಿರುವುದು ಕಂಡುಬರುತ್ತದೆ.

ಹೀಗೆ ಆಭರಣಗಳಲ್ಲಿ ನಾವು ಹಲವಾರು ರೀತಿಯ ಬಗೆಗಳನ್ನು/ಹೆಸರುಗಳನ್ನು ನೋಡಬಹುದು. ಒಟ್ಟಾರೆ ಆಭರಣಗಳು ಒಂದು ರೂಪ, ವಿನ್ಯಾಸಗಳನ್ನು ಒಳಗೊಂಡು ವಿಭಿನ್ನತೆಯನ್ನು ಹೊಂದಿವೆ ಎನ್ನಬಹುದು.

**ಕೊನೆ ಟಿಪ್ಪಣಿಗಳು**

೧. ದಾನೇಶ.ಎ.ಚೆಕ್ಕಿ, ಆಭರಣಗಳ ಬಗೆಗಿನ ಸಾಮಾಜಿಕ ದೃಷ್ಟಿಕೋನ, ಪುಟ, ೭.

೨. ಅದೇ ಪುಟ, ೩೩.

೩. ಅದೇ ಪುಟ, ೯.

೪. ಅದೇ ಪುಟ, ೧೦.

೫. ಅದೇ ಪುಟ, ೩೪.

೬. ಸೌಭಾಗ್ಯವತಿ.ಕೆ, ಜನಪದ ಆಭರಣಗಳು, ಪುಟ, ೩೪.

೭. ಅದೇ ಪುಟ, ೩೫.

೮. ದಾನೇಶ.ಎ.ಚೆಕ್ಕಿ, ಆಭರಣಗಳ ಬಗೆಗಿನ ಸಾಮಾಜಿಕ ದೃಷ್ಟಿಕೋನ, ಪುಟ, ೮.

೯. ಅದೇ ಪುಟ, ೧೨.

೧೦. ಅದೇ ಪುಟ, ೨೩.

೧೧. ಅದೇ ಪುಟ, ೭.

೧೨. ಅದೇ ಪುಟ, ೩೮.

೧೩. ಮುರಿಗೆಪ್ಪ.ಎಂ ಜಾನಪದ ಸಾಹಿತ್ಯ ದರ್ಶನ–೨೧, ಪುಟ, ೧೪೯.

೧೪. ಅದೇ ಪುಟ, ೧೫೧.

೧೫. ಅದೇ ಪುಟ, ೧೦೮.

* ಈ ಅಧ್ಯಾಯದಲ್ಲಿ ಬಳಸಿರುವ ಆಭರಣಗಳ ಹೆಸರುಗಳನ್ನು ಸೌಭಾಗ್ಯವತಿ.ಕೆ, ಜನಪದ ಆಭರಣಗಳು, ದೇವೇಂದ್ರ ಕುಮಾರ್ ಹಕಾರಿ, ಗ್ರಾಮೀಣ ಉಡುಗೆ ತೊಡುಗೆಗಳು, ಪಾಂಡುರಂಗಬಾಬು.ಡಿ, ಪಾಂಚಾಳ ವೃತ್ತಿಪದಕೋಶ, ಪಂಡಿತ ಹೆಚ್.ನಂಜೇಗೌಡ, ಜಾನಪದ ಕೋಶ ಕೃತಿಗಳು, ಕೇಶವನ್ ಪ್ರಸಾದ್.ಕೆ, ಲಂಬಾಣಿ ಸಮುದಾಯದ ಥಾಲ್ಯ ಪಂಗಡದ ಅಧ್ಯಯನ ಎಂ.ಫಿಲ್ ನಿಬಂಧ ಹಾಗೂ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದವುಗಳು.

❖❖❖

# ಅಧ್ಯಾಯ : ನಾಲ್ಕು

# ಆಭರಣಗಳು ಮತ್ತು ಭಾಷೆ

# ಅಧ್ಯಾಯ: ನಾಲ್ಕು

# ಆಭರಣಗಳು ಮತ್ತು ಭಾಷೆ

## ೪.೧. ಆಭರಣಗಳ ಭಾಷಿಕ ವಿವರಣೆ

### ೪.೧.೧. ಆಭರಣಗಳ ಹೆಸರುಗಳಲ್ಲಿ ಏಕಪದ ಘಟಕಗಳು

ಓಲೆ
ಪಿಲ್ಲಿ
ಕಾಲ್ಬಿಲ್ಲಿ
ನೂಪುರ
ನೇಮುರ
ಚೈನು
ಬಾಪುಲಿ
ಕೊಪ್ಪು
ವಾಕು
ಚಕ್ರ
ತೆನಿ
ನತ್ತು
ಮೀನ
ಕುಂಭ
ಹರಳು
ಮುರುಪು
ಬಂದಿ
ಮಿಂಚು
ತೋಡೆ
ಅಂದುಗೆ
ಫೈರ್ಝುಣ
ರುಳಿ
ತಾಲೂಕ
ಗೋಟ್
ಕಾಪು
ನವಿಲು
ಗೂಟ
ವಜ್ರ
ಗಾಡೆ
ವಂಕಿ
ಜುಮಕಿ
ಬುಗುಡಿ

ಸುರುಳಿ

ಪೊಲನೆ

ಕೊಂಡ್ಲು

ಕೀರನ್

ಪಟ್ಟಿಕಾ

ತಾಲೂಕ

ಮಮದಳ್ಯಾ

ಕಟ್ಟಾಣಿ

ಹುಜರ

ಬಾವಲ್ಯ

ಗಲ್ಸರ್

ಟಿಕ್ಕಾ

ಗಲಸೇರಿ

ಪೂಲಿ

ಚಟಿಕ

ಪೈಜಾಣ

ಬಿಲವಾರ

ಚೂಡಿಯಾ

ಲಿಜಾಂ

ಥಲ್ಲೆ

ಸುರಳ್ಯಾ

ಪಿಲಿಯಾ

ಟೀಕಿ

ಬೇಸರಿ

ನಾಥ್

ಕಪ್ಪ

ಜಾವಳಿ

ಝುಮ್ಕಿ

ಬುಗ್ಡಿ

ಅಲ್ಕಾತ್

ಮುರಿಕ್ಯಾ

ಪಿಲಿಯಾ

ಗೆಜ್ಜೆ

ದಂಡ್ಯಾ

ಪೂಲಾ

ಲಚ್ಛಾ

ಜಿಗನಾ

ಬಳೆ

ಘುಗುರಿ

ಅಡ್ಡಿಕೆ

ಗಾಡೆ

ತೋಡೆ

ಬಾಂವಟಿ

ಪೈಜವ್

ಜೋಡವೆ

ಭುರಿಯಾ

ಅಂಗುತ್ಲ

ಸುರುಳಿ

ರುಳ್ಳಿ

ನಧಿಯಾ

| | |
|---|---|
| ಪಂಜಾ | ಚಟಕಿ |
| ಬಿಚವಾ | ಮಾಟ್ಲಿ |
| ವಿಂಟಿ | ವಾಂಸಳಿ |
| ಕನಿಯಾ | ಚೂಡೋ |
| ಜೂಂಜರಾ | ಮೇಸರಿ |
| ಚಿಂತಾಕು | ಜಾಲರಿ |
| ಡಾಬು | |

ಆಭರಣಗಳ ಹೆಸರುಗಳು ಏಕಪದವನ್ನು ಹೊಂದಿರುತ್ತವೆ. ಇದಕ್ಕೆ ಯಾವುದೇ ರೀತಿಯ ಪ್ರತ್ಯಯಗಳು ಇರುವುದಿಲ್ಲ. ಇದು ಒಂದು ರೀತಿಯಲ್ಲಿ ವರ್ಗೀಕರಣವಾಗಿದೆ. ಆಭರಣಗಳು ಅದು ಯಾವುದೇ ಆಗಿರಬಹುದು. ಬಂಗಾರ, ಬೆಳ್ಳಿ, ಮುತ್ತಿನ ಯಾವುದು ಎಂದು ತಿಳಿಯದೆ ಬರೀ ಏಕಪದವನ್ನು ಕೂಡಿರುತ್ತದೆ. ಅಂದರೆ ಬಳೆ, ಓಲೆ, ಗೆಜ್ಜೆ, ನತ್ತು ಎಂಬುವುದು ಮಾತ್ರ ಇದರಲ್ಲಿ ಇರುತ್ತದೆ.

ಇದರಲ್ಲಿ ನಾವು ಸರ, ಗೆಜ್ಜೆ, ನತ್ತು ಎಂದು ಮಾತ್ರ ಏಕಪದ ಘಟಕಗಳೆಂದು ಹೇಳಬಹುದು. ಇದನ್ನು ಎಲ್ಲಿ ಧರಿಸುತ್ತಾರೆ/ಹಾಕಿಕೊಳ್ಳುತ್ತಾರೆ ಎಂದು ತಿಳಿಯುವುದೇ ಅದರ ಹೆಸರುಗಳನ್ನು ಅದರ ಏಕಪದಗಳನ್ನು ಹೇಳುವಂತಹದ್ದಾಗಿದೆ.

**೪.೧.೨. ವಿಶೇಷಣಾಯುಕ್ತ ಘಟಕಗಳು**

| | |
|---|---|
| ಪುತ್ಥಳಿ ಸರ | ನೆಲ್ಲಿಕಾಯಿ ಸರ |
| ಜೋಮಾಲೆ ಸರ | ಗುಂಡಿನ ಸರ |
| ಕಾಸಿನ ಸರ | ಶೃಂಗಾರ ಸರ |
| ಅವಲಕ್ಕಿ ಸರ | ಗೋಧಿ ಸರ |
| ಮಾವಿನಕಾಯಿ ಸರ | ಕಟ್ಟಾಣಿ ಸರ |
| ಕಂಠಿ ಸರ | ಚಕ್ರ ಸರ |
| ಮಾಣಿಕ ಸರ | ಪಂಚ ಸರ |
| ಮಣಿಸರ | ಕಂಟೀ ಸರ |
| ಕಾಫಿಬೀಜದ ಸರ | ನೆಲ್ಲಿಗುಂಡಿನ ಸರ |
| ಪದ್ಕದ ಸರ | ತಳಕಿನ ಸರ |

ಮುತ್ತಿನ ಸರ
ಕಾಳಿಮಟ್ಟಿ ಸರ
ಆಮೆ ಹೊಟ್ಟೆಯ ಸರ
ಬಟಾಣಿ ಸರ
ಗರತಿ ಮಣಿ ಸರ
ಟೀಕಿ ಸರ
ಮೋಹನ ಮಾಲೆ ಸರ
ಚಪಲ ಸರ
ನಾಗ ಸಂಪಿಗೆ ಸರ
ಮುತ್ತಿನ ಹಾರ
ಪದಕದ ಹಾರ
ದೀಪದ ಹಾರ
ಗರತಿ ಮಣಿ ಹಾರ
ಐದೆಳೆ ಮುತ್ತಿನ ಹಾರ
ಚಿನ್ನದ ಹಾರ
ಮುತ್ತಿನ ಬಳೆ
ಕುಸಿರಿಬಳೆ
ಮುರುಗಿನ ಬಳೆ
ಹರಳಿನ ಬಳೆ
ದಂತದ ಬಳೆ
ತಾಮ್ರದ ಬಳೆ
ರತ್ನದ ಬಳೆ
ಸರಗಿ ಬಂದಿ
ನವರತ್ನದೋಲೆ
ದಂತದೋಲೆ
ಬಾತಿನ ಓಲೆ

ಗುಂಡಿನ ಸರ
ಹವಳದ ಸರ
ಹಾಲುಮಣಿ ಸರ
ಪವನ ಸರ
ಚಿನ್ನದ ಗುಂಡಿನ ಸರ
ಜೋಮಾಲೆ ಸರ
ಅಷ್ಟದಳದ ಗುಂಡಿನ ಸರ
ಮಲ್ಲಿಗೆ ಸರ
ಕರಿಮಣಿ ಸರ
ನೀಲಮಣಿ ಹಾರ
ವಜ್ರದ ಹಾರ
ಲಕ್ಷ್ಮಿ ಹಾರ
ಜೋಡಿ ಹಂಸ ಪದಕದ ಹಾರ
ಒತ್ತು ಕಾಸಿನ ಹಾರ
ಲಾಳ್ಡಿ ಹಾರ
ಬಂಗಾರದ ಬಳೆ
ಗುಂಡಿನ ಬಳೆ
ತಿರುಪಣಿ ಬಳೆ
ಕಂಕಣ ಬಳೆ
ಗಾಜಿನ ಬಳೆ
ಉಣ್ಣೆಯ ಬಳೆ
ತೋಳಬಂದಿ
ಕಮಾರ ಬಂದಿ
ಶಂಖದೋಲೆ
ಕೇದಗೆಯೋಲೆ
ನವಿಲಿನ ಓಲೆ

ಚಿತ್ತಾರದ ಓಲೆ
ಮೀನಿನ ಓಲೆ
ಹೂವಿನ ಓಲೆ
ನವಿಲಿನ ಓಲೆ
ಲಕ್ಷ್ಮಿ ಓಲೆ
ಹರಳು ಮುತ್ತಿನ ಓಲೆ
ಬಿಳಿ ಹರಳಿನ ಓಲೆ
ಪುಷ್ಪ ಓಲೆ
ವಿಭಿನ್ನ ಶೈಲಿ ಓಲೆ
ಗುಂಡಿನೋಲೆ
ಮಿಂಚಿನೋಲೆ
ಕೇದಿಗೆಯೋಲೆ
ಒಂಟಿ ತಾಳಿ
ದಾರತಾಳಿ
ಬಟ್ಲುತಾಳಿ
ಲಿಂಗ ತಾಳಿ
ಸಿಂಪಿ ತಾಳಿ
ಕಾಲುಂಗುರು
ಸುರಳಿ ಕಾಲುಂಗುರ
ನೆಲ್ಲಿ ಕಾಲುಂಗುರ
ಚಿಕ್ಕ ಜುಮುಕಿ
ಗೆಜ್ಜೆ ಜುಮುಕಿ
ಮುತ್ತಿನ ಜುಮುಕಿ
ಚಿತ್ತಾರ ಜುಮುಕಿ
ಬುಗುಡಿ ಜುಮುಕಿ

ಜೋಡಿಮೀನಿನ ಓಲೆ
ದೀಪದ ಓಲೆ
ಹಂಸದ ಓಲೆ
ಬಿಳಿ ಮತ್ತು ಕೆಂಪು ಹರಳಿನ ಓಲೆ
ಅಡ್ಡಿಕೆ ಓಲೆ
ನಕ್ಷತ್ರದ ಓಲೆ
ಚಂದ್ರ ನಕ್ಷತ್ರ ಓಲೆ
ಚಿನ್ನದ ಗುಂಡಿನ ಓಲೆ
ಅಕ್ಕಿಯೋಲೆ
ನವರತ್ನದೋಲೆ
ದಂತದೋಲೆ
ಸೀಮೆ ಬೆಳ್ಳಿಯ ಓಲೆ
ಜೋಡಿ ತಾಳಿ
ಪೆರಿತಾಳಿ
ಲಕ್ಷ್ಮಿ ತಾಳಿ
ಸಾದಾ ತಾಳಿ
ಹರಳಿನ ತಾಳಿ
ಸುತ್ತು ಕಾಲುಂಗುರ
ಗೆಜ್ಜೆ ಕಾಲುಂಗುರ
ಹರಳಿನ ಜುಮುಕಿ
ಸಾದಾ ಜುಮುಕಿ
ಹವಳದ ಜುಮುಕಿ
ಗಂಟೆಶೈಲಿ ಜುಮುಕಿ
ಬಣ್ಣದರಳಿನ ಜುಮುಕಿ
ಮುತ್ತಿನ ಜುಮುಕಿ

| | |
|---|---|
| ನೀಲದುಂಗುರ | ನವರತ್ನದುಂಗುರ |
| ಹರಳೀನ ಉಂಗುರ | ಹವಳದ ಉಂಗುರ |
| ಮುದ್ರೆಯುಂಗುರ | ಮಡಿಉಂಗುರ |
| ನಾಗ ಉಂಗುರ | ಸುತ್ತು ಉಂಗುರ |
| ಗೆಜ್ಜೆ ಉಂಗುರ | ಕೆತ್ತಿದುಂಗುರ |
| ತೊಂಡಿಯುಂಗುರ | ವಂಕಿ ಉಂಗುರ |
| ಕೊಳವೆ ಉಂಗುರ | ಕಡಗದುಂಗುರ |
| ಗೇರುಂಗುರ | ಚಂದ್ರದುಂಗುರ |
| ಚಿಕ್ಕರಳಿನ ಉಂಗುರ | ಹೂವಿನುಂಗುರ |
| ಕನ್ನಡಿಯುಂಗುರ | ನಾಗ ಉಂಗುರ |
| ವಜ್ರದುಂಗುರ | ವೀನೆಯುಂಗುರ |
| ಹಣ್ಣಿನುಂಗುರ | ಕಳಾವರದುಂಗುರ |
| ಸಾದಾಉಂಗುರ | ಆನೆಯುಂಗುರ |
| ಹರಳಿನುಂಗುರ | ಧಾನ್ಯದುಂಗುರ |
| ಬಳೆಯುಂಗುರ | ಹಸ್ತಿದುಂಗುರ |
| ಎರಡೆಳೆ ಗುಂಡು | ಅಷ್ಟಪೈರ್ |
| ದೊಡ್ಡುಂಡು | ನೆಲ್ಲಿ ಗುಂಡು |
| ಪಟ್ಟಿ ಗುಂಡು | ಸಣ್ಣುಂಡು |
| ಜೋತಿ ಗುಂಡು | ಹಾಲಣಿ ಕಡಗ |
| ಸಾದಾ ಕಡಗ | ಬೆಳ್ಳಿಯ ಕಡಗ |

ಇದು ವಿಶೇಷಣಯುಕ್ತವಾಗಿ ಇರುವಂತಹದ್ದಾಗಿದೆ. ಸಾಮಾನ್ಯವಾಗಿ ಬಳೆ, ಓಲೆ, ಸರ ಹೀಗೆ ಇರುವುದನ್ನು ವಿಶೇಷಣವಾಗಿ ಬಂಗಾರದ ಬಳೆ, ಮುತ್ತಿನ ಓಲೆ ಎಂದು ಹೇಳುವುದು ವಿಶೇಷಣವಾಗಿದೆ. ಅದು ಯಾವುದೇ ರೀತಿಯ ಆಭರಣವಾಗಿರಬಹುದು. ಎಲ್ಲಾ ಆಭರಣಗಳಿಗೆ ಒಂದು ವಿಶೇಷಣವನ್ನು ಇದು ತಿಳಿಸುತ್ತದೆ. ಬಳೆಗಳಲ್ಲಿ ಓಲೆ, ಸರ, ತಾಳಿ ಹೀಗೆ ಎಲ್ಲಾ ಆಭರಣಗಳಲ್ಲಿ ವಿಶೇಷಣವನ್ನು, ಗುಂಡಿನ ಸರ, ನಲ್ಲಿಕಾಯಿ ಸರ ಹಾಗೆಯೇ ಲಕ್ಷ್ಮಿ ಓಲೆ, ನವರತ್ನದೋಲೆ ಹೀಗೆ ಅದರ ವಿಶೇಷಣವನ್ನು ಹೇಳುವುದೇ ವಿಶೇಷಣಾಯುಕ್ತ ಎಂದು ಹೇಳಬಹುದು.

### ೪.೧.೩. ವಿವರಣಾತ್ಮಕ ವಾಕ್ಯಶೈಲಿಯ ರಚನೆ

| | |
|---|---|
| ನೀಲಮಣಿ ಹಾರ | ಕೊತಂಬರಿ ಬೀಜದ ಸರ |
| ಗುಂಡಿನ ಮಣಿ ಸರ | ಚಿನ್ನದ ಹೂವು ಕೊಳವೆಯ ಸರ |
| ಹಾಲುಮಣಿ ಸರ | ಮೂರೆಳೆಯ ಚಿನ್ನದ ಗುಂಡಿನ ಸರ |
| ಗರತಿ ಮಣಿ ಸರ | ಕರಿಮಣಿ ಚಿನ್ನದ ಗುಂಡಿನ ಸರ |
| ಮೋಹನ ಮಾಲೆ ಸರ | ಅಷ್ಟದಳದ ಗುಂಡಿನ ಸರ |
| ನಾಗಸಂಪಿಗೆ ಸರ | ಜೋಡಿಹಂಸ ಪದಕವಿರುವ ಹಾರ |
| ಐದೆಳೆ ಮುತ್ತಿನ ಹಾರ | ಎಲೆ ಕಾಯಿ ಹೂವಿನ ಹಾರ |
| ಒತ್ತು ಕಾಸಿನ ಹಾರ | ಪದಕದ ಏಳು ಗುಂಡಿನ ಹಾರ |
| ಕೆಂಪು ಬಿಳಿ ಹರಳಿನ ನೆಕ್ಲೇಸ್ | ಕೆಂಪು ಹಲಗೆ ವಜ್ರ ಮುತ್ತಿನ ಪದಕ |
| ಅಂಗುವಿಕೆ ವೀರ ಮುದ್ರೆ | ಉಳ್ಳಾಗಡ್ಡಿ ಹೂವಿನ ಪಿಲ್ಲಿ |
| ಬಿಡಿ ಮಾವಿನಕಾಯಿ ಚೈನು | ಚಂದ್ರಕೋಲಕ್ಯಾದ್ಗಿ |
| ಕಂಟಿವಾಲೆ ಸರಪ್ಣಿ | ಮುತ್ತು ಹವಳ ಟಾಪ್ಸ್ |
| ಬಿಳಿ ಮತ್ತು ಕೆಂಪು ಹರಳಿನ ಓಲೆ | ಕಸ್ಸೆ ಬಳ್ಳಿಯ ಚೈನು |
| ಸೀಮೆ ಬೆಳ್ಳಿಯ ಓಲೆ | ಹರಳು ಮುತ್ತಿನ ಓಲೆ |
| ನಕ್ಷತ್ರದ ಮುತ್ತಿನ ಓಲೆ | ಚಂದ್ರ ನಕ್ಷತ್ರದೋಲೆ |
| ಬಿಳಿ ಹರಳಿನ ಓಲೆ | ಚಿನ್ನದ ಗುಂಡಿನ ಓಲೆ |
| ಕೊಡಗಿನ ಶೈಲಿಯ ಜುಮುಕಿ | ಗಂಟೆಶೈಲಿ ಜುಮುಕಿ |
| ಗೋಧಿಮಣಿ ಹೂವು | ಸಿಂಹದ ಮುಖದ ಕಂಕಣ |
| ಜಾಲರಿ ತೋಳು ಬಟ್ಟು | ತೆನಿ ಮೂಗು ಬಟ್ಟು |
| ಅರೆ ಚಂದ್ರ ಮೂಗು ಬಟ್ಟು | ಸುರುಳಿ ಮುತ್ತಿನ ನತ್ತು |
| ಅರ್ಧ ಚಂದ್ರಾಕಾರದ ಬುಲಾಕು | ಹರಳು ಗುಂಡಿನ ಮಾಟಿ |
| ಬಿಳಿ ಹರಳಿನ ಮಾಟಿ | ಮುತ್ತು ಕೆಂಪು ಹರಳಿನ ಮಾಟಿ |
| ವಜ್ರ ಕಟ್ಟಿದ ಡಾಬು | ರನ್ನ ಓಲೆಯ ಉಡಿದಾರ |
| ಹೊನ್ನ ಗಂಟೆ ಸರ | ಒಡ್ಯಾಣ ಶೈಲಿಯ ಡಾಬು |

| | |
|---|---|
| ಮಾವಿನಕಾಯಿ ಒಡ್ಯಾಣ | ಕೆಂಪು ಬಿಳಿಯ ಲಾಳ್ಡಿಹಾರ |
| ಚಂದ್ರಾಕಾರದ ರಪಿಯಾಹಾರ | ಗೆಜ್ಜೆ ಸರಗಳ ಜೋಡಿ |
| ಬಿಳಿಯ ದಂತಿ ಚೂಡಿಗಳು | ಬಿಳಿಯ ಕರ್ಪೂರದ ಚೂಡಿಗಳು |

**ಸಂಕೀರ್ಣ**

ಗೆಜ್ಜೆ ಟಿಕ್ಕಿ: ಬಂಗಾರದ ಗುಂಡುಗಳಿಂದ ಕೂಡಿದ ಒಂದು ಆಭರಣ

| | |
|---|---|
| ಗುಂಡಿನ ಟಿಕ್ಕಿ | ಜೀರಮಣಿ ಟಿಕ್ಕಿ |
| ವಜ್ರೆ ಟಿಕ್ಕಿ | ಸುರಳಿ ಟಿಕ್ಕಿ |
| ಕರಿಮಣಿ ಟಿಕ್ಕಿ | ಸೀಮಂತ ಮಣಿ |
| ಬೇತ್ಗಮಣಿ | ಉಳ್ಳಾಗಡ್ಡಿ ಹೂವಿನ ಪಿಲ್ಲಿ |
| ಗುಳ್ಳಿ ಪಿಲ್ಲಿ | ಕಳಸದ ಪಿಲ್ಲಿ |
| ಕಳವಾರ ಪಿಲ್ಲೆ | ಸುರುಳಿ ಪಿಲ್ಲೆ |
| ಗೆಜ್ಜೆ ಪಿಲ್ಲಿ | ಬಾಳಿ ಪಿಲ್ಲಿ |
| ಕಿರಿಪಿಲ್ಲಿ | ಬಳ್ಳಿ ಮಾಟಿ |
| ಎಲೆ ಮಾಟಿ | ಪಟ್ಟಿ ಮಾಟಿ |
| ಗೀರು ಮಾಟಿ | ಹರಳು ಗುಂಡಿನ ಮಾಟಿ |
| ಬಿಳಿ ಹರಳಿನ ಮಾಟಿ | |

ಇಲ್ಲಿ ಮೂರು ಮತ್ತು ನಾಲ್ಕು ಪದಗಳು ಇರುವ ಆಭರಣಗಳ ಪಟ್ಟಿ. ಇದರಲ್ಲಿ ವಸ್ತುವಿನ ಹೆಸರು, ಅದನ್ನು ಯಾಕೆ ಬಳಸುತ್ತೇವೆ ಹಾಗೆ ಆಭರಣಗಳ ಸ್ವರೂಪ, ರೂಪ ಇದರಲ್ಲಿ ಇರುತ್ತದೆ. ಒಂದು ಆಭರಣಗಳಲ್ಲಿರುವ ಮೂರು-ನಾಲ್ಕು ಪದಗಳು ಹೊಂದಿರುವ ಆಭರಣಗಳ ಹೆಸರು. ಮೂರೆಳೆಯ ಚಿನ್ನದ ಗುಂಡಿನ ಸರ. ಒಂದು ಉದ್ದವಾದ ೩-೪ ಪದಗಳನ್ನು ಹೊಂದಿರುವ ಆಭರಣಗಳ ವಾಕ್ಯ ಶೈಲಿಯ ರಚನೆಯಾಗಿದೆ.

**ವಿವರಣೆ**

ಆಭರಣಗಳು ಮತ್ತು ಭಾಷಿಕ ವಿವರಣೆಯಲ್ಲಿ ಆಭರಣಗಳ ಹೆಸರುಗಳ ಏಕಪದಗಳು ಘಟಕಗಳು. ಅಂದರೇ ಆಭರಣಗಳು ಎಲ್ಲಿ, ಯಾವುದು ಎಂದು ತಿಳಿಯದೇ ಅದರ ಏಕಪದಗಳನ್ನು ಮಾತ್ರ ಹೊಂದಿರುವಂತಹದ್ದಾಗಿದೆ. ಅಂದರೇ ಗೆಜ್ಜೆ, ಓಲೆ, ನತ್ತು, ಬಳೆ ಹೀಗೆ ಏಕ ಪದಗಳು ಹೇಳುವಂತಹದ್ದಾಗಿದೆ. ಇದು ಬಂಗಾರದ, ಚಿನ್ನದ, ಮುತ್ತಿನ ಎಂದು ಹೇಳದೆ ಅದು ಬರಿ

ಪದ ಮಾತ್ರವಾಗಿರುತ್ತದೆ. ಹಾಗೆ ವಿಶೇಷಣಯುಕ್ತ ಆಭರಣಗಳನ್ನು ಹೇಳುತ್ತೇವೆ. ಬಳೆ, ಓಲೆ, ಗೆಜ್ಜೆ ಇವುಗಳನ್ನು ಹೇಳುತ್ತದೆ. ಅಂದರೆ ಬಂಗಾರದ ಬಳೆ, ಮುತ್ತಿನ ಓಲೆ ಇದರ ವಿಶೇಷತೆ ಹೇಳುವಂತಹದ್ದಾಗಿದೆ. ಇದನ್ನು ಎಲ್ಲಿ ಧರಿಸುತ್ತಾರೆ ಎಂಬುದು ತಿಳಿದಿರುತ್ತದೆ.

ವಿವರಣಾತ್ಮಕ ವಾಕ್ಯಶೈಲಿಯ ಭಾಷಿಕ ವಿವರಣೆಯಲ್ಲಿ ಅದರ ವಾಕ್ಯರಚನೆಯಲ್ಲಿ ಮೂರು-ನಾಲ್ಕು ಪದಗಳು ಹೊಂದಿರುತ್ತವೆ. ಆಭರಣಗಳನ್ನು ಒಂದೇ ಪದಗಳಲ್ಲಿ, ವಾಕ್ಯ ರಚನೆಯಲ್ಲಿ ಅದರ ರೂಪ, ಹೆಸರುಗಳಿರುವುದು ನೋಡುತ್ತೇವೆ. ಹಾಗೆಯೇ ಇದರಲ್ಲಿ ವಸ್ತು ಸಹ ಇರುತ್ತದೆ ಹೀಗೆ ಆಭರಣಗಳ ಮತ್ತು ಭಾಷಿಕ ವಿವರಣೆಯಲ್ಲಿ ವಸ್ತು, ಆ ಕಾಲದ ಆಭರಣಗಳ ಬಳಕೆ, ಭಾಷೆಯಲ್ಲಿ ಸ್ಥಳೀಯ ಆಭರಣಗಳಿಗೆ ಹೆಸರುಗಳಿರುವಾಗ ಅದು ಮೊದಲಿನಿಂದಲೂ ಬಂದಿರುತ್ತದೆ. ಆ ಹೆಸರು ಏಕ ಪದಗಳಲ್ಲಿ ಅದಕ್ಕೆ ಯಾವ ಹೆಸರು ಬಳಸಿರುವುದು ಗೊತ್ತಿರಲ್ಲ. ಬಳೆ ಅಂದರೆ ಬಳೇ ಮಾತ್ರ. ಅದು ಯಾವುದೇ ರೀತಿಯಲ್ಲಿರಬಹುದು. ಬಂಗಾರದ, ಮುತ್ತಿನದ್ದಾಗಿರಬಹುದು. ಓಲೆಯು ಸಹ ಅದು ಯಾವುದೇ ಇರಬಹುದು. ಅದು ಬೆಳ್ಳಿಯದ್ದೂ ಇರಬಹುದು.

ಏಕಪದಗಳಲ್ಲಿ ಅದು ಎಲ್ಲಿ ಧರಿಸುತ್ತಾರೇ ಎಂದು ತಿಳಿಯುವುದೇ ಅದು ಅದರ ಏಕಪದ ಆಭರಣಗಳ ಹೆಸರು ಮಾತ್ರ ಹೇಳಬಹುದು. ವಿಶೇಷಣಯುಕ್ತದಲ್ಲಿ ಆಭರಣಗಳನ್ನು ಎಲ್ಲಿ ಹಾಕಿಕೊಳ್ಳುತ್ತಾರೆ. ತಿಳಿದಿರುತ್ತದೆ. ಅದಕ್ಕೆ ಆಭರಣಗಳಲ್ಲಿ ಅದರ ವಿಶೇಷತೆಯನ್ನು ಹೇಳುತ್ತದೆ. ಮೊದಲಿನ ಆಭರಣಗಳು ಕಾಲಕ್ಕೆ ತಕ್ಕಂತೆ ಬದಲಾವಣೆಯಾಗುತ್ತಲಿದೆ. ಆಧುನಿಕತೆಗೆ ತಕ್ಕಂತೆ ಆಭರಣಗಳು ಬದಲಾವಣೆಯಾಗಿರುವುದನ್ನು ನೋಡಬಹುದು.

ಭಾಷೆಯಲ್ಲಿ ಸ್ಥಳೀಯ ಆಭರಣಗಳಿಗೆ ಹೆಸರು ಇರುವಾಗ ಅದು ಮೊದಲಿನಿಂದಲೂ ಮುಂದುವರಿದಿರುತ್ತದೆ. ಆದರೆ ಅದು ಏಕಪದ ಘಟಕಗಳಲ್ಲ.

### ೪.೨. ಇತರ ಭಾಷೆಯ ಪ್ರಭಾವಗಳು

**ಇಂಗ್ಲಿಷ್**

| | |
|---|---|
| ಐಸ್‌ಕ್ರಿಂ ತೋಡೆ | ಐರನ್‌ರಿಂಗ್ |
| ಕಂಟಿವಾಲೆ ಸರ್ಪಳಿ | ಕಾಲ ಸರ್ಪಳಿ |
| ಕಾಲ್ ಚೈನು | ಕಿವಿ ಚೈನು |
| ಕೆನ್ನೆ ಸರಪಳಿ | ಕೆಂಪು ಬಿಳಿ ಹರಳಿನ ನೆಕ್ಲೇಸ್ |
| ಗೆಜ್ಜೆ ನೆಕ್ಲೇಸ್ | ಗೆಜ್ಜೆ ಚೈನು |
| ಚೈನ್ | ಚೈನ್ ಪದಕ್ |

| | |
|---|---|
| ನೋಜ್‌ರಿಂಗ್ | ನೆಕ್ಲೇಸ್ |
| ಬಿಡಿ ಮಾವಿನ ಕಾಯಿ ಚೈನು | ಬಿಲವಾರ |
| ಜಿಲೇಬಿ/ದಾರ ಚೈನು | ಬಿಡಿ ಮಾವಿನಕಾಯಿ ಚೈನು |
| ಬ್ರೆಸ್‌ಲೈಟ್ ಚೈನ್ | ಬಿಲ್ವಾರ |
| ಮಧ್ಯಮ ರಿಂಗು | ಮುರಡಿ ಸರ್ಪಳಿ |
| ಮೇಘಾಲಯ ರಿಂಗು | ರಿಂಗು |
| ರಿಂಗ್ ಮೂಗು ಬಟ್ಟು | ರನ್ ಜೋಡು |
| ಸರಪಳಿ ಪಟ್ಟಿ | ಸುರಳಿ ಚೈನು |

ಉರ್ದು

| | |
|---|---|
| ಚಾಂದತಾರ ಗಲತೇರಿ | ಕೀರನ್ |
| ಅಲ್ನತ್ | ತಾಲೂಕು |
| ಪೂಲಾ | ಡಾಗಬೇಲ |
| ಗಲ್ಸರ್ | ಕಿರಾಚೀಹಾಲ್ |
| ಫೂಲ್‌ಹಾರ್ | ಮೋತಿಯೋಂಕಾಹಾರ |
| ಕಮರಪಟ್ಟಿ | ಲಿಜಾಂ |
| ಫೈಜಬ್ | ಜಾಲ್ರಾ |

ಆಭರಣಗಳಲ್ಲಿ ಭಾಷೆಯ ಪ್ರಭಾವ ಇದೆ. ಆಧುನಿಕವಾದಂತಹ ಆಭರಣಗಳ ಸಾಮಾನ್ಯವಾಗಿ ಇಂಗ್ಲಿಷಿನಿಂದ ಬಂದಂತಹದ್ದು. ಪಾರಂಪರಿಕವಾಗಿ ಬಂದಂತಹದ್ದು ಕನ್ನಡದ್ದಾಗಿರುತ್ತದೆ. ಇದು ಆಯಾ ಕಾಲದ ಆಳ್ವಿಕೆಯಿಂದ ಬಂದಂತಹ ಬಾಷೆಗಳಾಗಿವೆ.

ದೇವರಿಗೆ ಸಂಬಂಧಪಟ್ಟಂತಹ ಹೆಸರುಗಳು ಸಂಸ್ಕೃತದ್ದಾಗಿರುತ್ತದೆ. ಮನುಷ್ಯರಿಗೆ ವಿವಾಹಕ್ಕೆ ಸಂಬಂಧಪಟ್ಟಂತೆ ಆ ಪ್ರದೇಶದಲ್ಲಿ ಯಾವ ಭಾಷೆ ಪ್ರಭಾವವಿರುತ್ತದೆಯೋ ಅದರ ಇತರ ಭಾಷೆಯ ಆಭರಣಗಳ ವಿರಣೆಯನ್ನು ಹೇಳುವುದಾಗಿದೆ.

ಆಭರಣಗಳ ಭಾಷಿಕ ವಿವರಣೆಯಲ್ಲಿ ಇತರ ಭಾಷೆಯ ಪ್ರಭಾವ ಕಂಡುಬರುತ್ತದೆ. ಆಭರಣಗಳ ಹೆಸರುಗಳಲ್ಲಿ ಭಾಷೆಯ ಮಿಶ್ರಣವಾಗಿರುವುದು ನೋಡುತ್ತೇವೆ. ಇಂಗ್ಲಿಷ್‌ನಲ್ಲಿ ರಿಂಗ್, ಚೈನ್, ಉರ್ದುವಿನಲ್ಲಿ ಚಾಂದ್‌ತಾರ, ಗಲಸೇರಿ, ತೋಳಾಭರಣವಾಗಿದೆ. ಹೀಗೆ ಹಿಂದಿ, ಮರಾಠಿಯಲ್ಲಿಯೂ ಸಹ ಭಾಷೆಯ ಮಿಶ್ರಣವಾಗಿರುವುದನ್ನು ನೋಡುತ್ತೇವೆ. ಹೀಗೆ ಭಾಷೆಯ ಪ್ರಭಾವವಾಗಿರುವುದು ತಿಳಿಯಬಹುದು.

## ೪.೩. ಗಾದೆಗಳು

ಕನ್ನಡ ಸಾಹಿತ್ಯ, ಚರಿತ್ರೆ, ಸಂಪ್ರದಾಯ, ಸಂಸ್ಕೃತಿ ಇನ್ನಿತರೆ ವಿಷಯಗಳ ಕುರಿತು ಸಂಶೋಧನೆ ಕೈಗೊಳ್ಳುವ ಸಂಶೋಧಕರಿಗೆ ಜನಪದ ಸಾಹಿತ್ಯ ಬಹು ಮುಖ್ಯ ಆಕರಗಳಾಗಿವೆ. ಜನಪದ ಸಾಹಿತ್ಯದಲ್ಲಿ ಉಲ್ಲೇಖವಾಗಿರುವ ಕಥೆ, ಕಾವ್ಯ, ಗಾದೆಗಳು, ಒಡಪು, ಒಗಟು, ಭಾಷೆ ಇವೆಲ್ಲವೂ ಆ ಕಾಲದ ಒಟ್ಟು ಜೀವನ ಕ್ರಮವನ್ನು ಕುರಿತು ವಿವರಿಸುತ್ತದೆ. ಇಡೀ ಜನಪದ ಸಾಹಿತ್ಯ ಸಮಕಾಲೀನ ಜೀವನ ಕ್ರಮದ ನೋವು ನಲಿವುಗಳನ್ನು ಕಟ್ಟಿಕೊಡುತ್ತದೆ. ಹಾಗಾಗಿ ಸಾಹಿತ್ಯ ಸಂಶೋರ್ಧಕರಿಗೆ ಜನಪದ ಸಾಹಿತ್ಯವು ಮುಖ್ಯ ಆಕರವಾಗಿ ಕಂಡುಬಂದಿದೆ.

ಜನಪದರು ಪ್ರಸ್ತಾಪಿಸಿರುವ ಗಾದೆಗಳಲ್ಲಿ ಸಮಕಾಲಿನ ಜನರು ಧರಿಸುತ್ತಿದ್ದ ಆಭರಣಗಳ ಬಗ್ಗೆಯೂ ಕೂಡ ಪ್ರಸ್ತಾಪವಿದೆ. ಈ ಹಿನ್ನೆಲೆಯಲ್ಲಿ ಗಾದೆಗಳನ್ನು ನೋಡುವುದಾದರೆ 'ಒಡವೆರಿಗೆ ಒಡವೆ ಕೊಟ್ಟರೆ ಮಧುವಣಗಿತ್ತಿಗೆ ಮುನಿಸು ಬಂತಂತೆ' ಎಂಬ ಗಾದೆಯು ಮದುವೆಗೆ ಸಂಬಂಧಿಸಿದ್ದಾಗಿದ್ದು ಇದು ಸಮಾಜದ ಸಾಮೂಹಿಕ ಜವಾಬ್ದಾರಿ ಕೂಡ ಆಗಿದೆ. ಕಡು ಬಡವನಾದ ವ್ಯಕ್ತಿ 'ಸಾವಿರ ಸುಳ್ಳು ಹೇಳಿ ಒಂದು ಮದ್ವೆ ಮಾಡು' ಎನ್ನುವಂತೆ ಹೆಣ್ಣನ್ನು ನೋಡಲು ಬಂದಾಗ ಸಿರಿವಂತನೆಂದು ಹೇಳಿ ಅಕ್ಕಪಕ್ಕದ ಜನರಿಂದ ಒಡವೆ ತೆಗೆದು ಮದುವೆಯಲ್ಲಿ ಹಾಕಿ ಮದುವೆ ನಂತರ ಹಿಂತಿರುಗಿಸಿದಾಗ, ವಧು ಪ್ರತಿಭಟಿಸಿ ಮುನಿಸಿಕೊಳ್ಳುವುದು ಸಹಜ. ಆಗ ಮೂರನೆಯವರಿಂದ 'ಒಡವೆರಿಗೆ ಒಡವೆ ಕೊಟ್ಟರೆ ಮದುಗಿತ್ತಿಗೆ ಮುನಿಸು ಬಂತಂತೆ' ಎಂಬ ಗಾದೆ ಹುಟ್ಟಿಕೊಂಡಿರಬೇಕು. ಇಲ್ಲಿ ಕಾರ್ಯ-ಕಾರಣ ಏನೇ ಇರಲಿ. ಅಂದಿನ ಸಾಮಾಜಿಕ ಸ್ಥಿತಿಗತಿ, ಆಚಾರ ವಿಚಾರಗಳು ಹಾಗೂ ಮಾನವೀಯ ಸಂಬಂಧಗಳು ಇಂಥ ಗಾದೆಗಳ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.

ಜನಸಾಮಾನ್ಯರ ಬದುಕು ಭಾಷೆಯಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿರುವುದು ಮಾತ್ರವಲ್ಲದೆ, ಅದಕ್ಕೆ ಶಕ್ತಿಯನ್ನು, ಸಂಪನ್ನತೆಯನ್ನು ತಂದುಕೊಟ್ಟಿದೆ. ಗಾದೆಯಿಲ್ಲದೆ ಅವರ ಬದುಕಿಲ್ಲ. ಸಮಯ ಸಂದರ್ಭಾನುಸಾರ ಜನಪದರು ತಮ್ಮ ದಿನನಿತ್ಯ ಬದುಕಿನಲ್ಲಿ ಗಾದೆಗಳನ್ನು ಬಳಸುತ್ತಾ ಬಂದಿದ್ದಾರೆ. ಗಾದೆಯಿಲ್ಲದ ದೇಶವಿಲ್ಲ, ಭಾಷೆಯಿಲ್ಲ ಎಂದು ಸಾಮಾನ್ಯವಾಗಿ ಹೇಳುತ್ತಾರೆ. ಆದರೆ ಜನಭಾಷೆಯಲ್ಲಿ ಮಾತ್ರ ಗಾದೆಗಳ ಅಸ್ತಿತ್ವ ಎಂಬುದನ್ನು ನೆನಪಿಡಬೇಕು.

ಗಾದೆಗಳು ನೀತಿಯನ್ನು ಅವಲಂಬಿಸಿರುವಂತಹದು. ಅಭ್ಯಾಸದಲ್ಲಿ ಪವಿತ್ರಗ್ರಂಥ, ಕಾವ್ಯ, ಶಾಸನಗಳು ಎಷ್ಟು ಮುಖ್ಯವೋ ಹಾಗೆಯೇ ಗಾದೆಗಳು ಮುಖ್ಯವಾಗುತ್ತವೆ. ವಿವಿಧ ಸಂದರ್ಭಗಳಲ್ಲಿ ಗಾದೆಗಳು ಬಳಕೆಯಾಗಿರುವುದನ್ನು ನಾವು ನೋಡಬಹುದಾಗಿದೆ.

ಮನುಷ್ಯನ ಬದುಕಿನಲ್ಲಿ ಇವು ಬಹಳ ಪ್ರಮುಖ ಪಾತ್ರ ನಿರ್ವಹಿಸುತ್ತಿವೆ. "ವಿದ್ಯಾವಂತ-ಅವಿದ್ಯಾವಂತ, ಸಾಮಾನ್ಯ-ಅಸಮಾನ್ಯ, ಶ್ರೀಮಂತ-ಬಡವ, ಅರಸು-ಆಳು ಹೀಗೆ ಎಲ್ಲರ ಜೀವನದಲ್ಲಿ ಗಾದೆ ಪ್ರವೇಶಿಸಿದೆ. ಗಾದೆ ಚಿಕ್ಕದಾಗಿದ್ದರೂ, ಚೊಕ್ಕದಾಗಿರುತ್ತದೆ. ಅಲ್ಲಿ ಮಾತು ಮಿತವಾಗಿ, ಹಿತವಾಗಿ ಪ್ರಜ್ವಲಿಸುತ್ತದೆ.

ಇದು ಸರಳವಾಗಿ, ಸ್ಪಷ್ಟವಾಗಿ, ಸಂಕ್ಷಿಪ್ತವಾಗಿರುತ್ತದೆ. ಗಾದೆಯಿಲ್ಲದೆ ಭಾಷೆಯಿಲ್ಲ. ಗಾದೆ ಬರದ ಮನುಷ್ಯನಿಲ್ಲ. ಗಾದೆ ಇದು ಮನುಷ್ಯರ ಬದುಕನ್ನು ರೂಪಿಸಿ, ನಿಯಂತ್ರಿಸಿ, ನೀತಿ ಹೇಳಿ, ರಕ್ಷಿಸಿ, ಆತ್ಮವಿಶ್ವಾಸವನ್ನು ತುಂಬುವಂತಹದ್ದಾಗಿದೆ.

"ಗಾಥೆ', 'ಗಾಹೆ' ಎಂಬುದು ಗಾದೆಯಾಗಿದೆ. ಕನ್ನಡದಲ್ಲಿ ಗಾದೆ, ನಾಣ್ನುಡಿ ಎಂದು ಕರೆಯಲಾಗುತ್ತದೆ. ಗಾದೆಗಳು ಹಲವರಲ್ಲಿ ಹಲವು ರೀತಿಯಲ್ಲಿ ಕಂಡು ಬರುತ್ತದೆ."[೧] ಗಾದೆ ವೇದಕ್ಕೆ ಸಮವಾದುದು. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂದು ವಿದ್ವಾಂಸರು ಹೇಳಿದ್ದಾರೆ.

ಗಾದೆಗಳು ಸಂಪ್ರದಾಯ, ಆಚರಣೆ, ವಿಧಿ-ನಿಷೇಧ, ಜನರ ರೀತಿ-ನೀತಿ, ನಿಯಮ-ನಡವಳಿಕೆ, ವ್ಯವಹಾರಿಕ ಬದುಕು, ವ್ಯಂಗ್ಯ ಎಲ್ಲವೂ ಸೇರ್ಪಡೆಗೊಂಡಿವೆ. ಹಾಗಾಗಿ ಜನರು ಧರಿಸುತ್ತಿದ್ದ ಆಭರಣಗಳ ಕುರಿತಾಗಿ ಹುಟ್ಟಿಕೊಂಡಿರುವ ಗಾದೆಗಳನ್ನು ನಾವಿಲ್ಲಿ ನೋಡಬಹುದು.

**ಗಾದೆಗಳ ವಿವರಣೆ**

**೧. ಇಟ್ಟರೆ ತೊಟ್ಟರೆ ಪುಟ್ಟಕ್ಕನೂ ಚಂದ:** ಪುಟ್ಟಕ್ಕನೆಂದರೆ ಆಕಾರದಲ್ಲಿ ಸಣ್ಣವಳು, ಸ್ವಲ್ಪ ಕುರೂಪಿಯೂ ಆಗಿರಬಹುದು. ಹಾಗಾಗಿ ಅವಳ ನಿಲುವು ಆಕರ್ಷಕವೆನಿಸುವುದಿಲ್ಲ. ನೋಡುಗರನ್ನು ಆಕರ್ಷಿಸುವುದಕ್ಕೋಸ್ಕರ ಅವಳು ನಾನಾ ಬಗೆಯ ಬಂಗಾರದ ಒಡವೆಗಳನ್ನು ಇಟ್ಟುಕೊಳ್ಳುತ್ತಾಳೆ. ಅಲ್ಲದೆ ಹೊಸ ರೀತಿ-ವಿನ್ಯಾಸಗಳ ಪೋಷಾಕುಗಳನ್ನು ತೊಟ್ಟುಕೊಳ್ಳುತ್ತಾಳೆ. ಪರಿಣಾಮವಾಗಿ ಆಕೆ ತಕ್ಕಮಟ್ಟಿಗಾದರೂ ಚೆಲುವೆಯಾಗಿ ಕಾಣಿಸುತ್ತಾಳೆ.

**೨. "ಆಲೆಗೆ ಓಲೆಯಿಲ್ಲ; ಕೊರಳಿಗೆ ತಾಳಿಯಿಲ್ಲ:** ಕಿವಿಯಲ್ಲಿ ಓಲೆ ಧರಿಸುವ ಜಾಗವನ್ನು ಆಲೆ ಎನ್ನುತ್ತಾರೆ. ಉಳ್ಳವರೇನೋ ಬಗೆ ಬಗೆಯ ಕರ್ಣಾಭರಣಗಳನ್ನು ಹಾಕಿಕೊಳ್ಳುತ್ತಾರೆ. ಆದರೆ ಬಡವರಾದವರಿಗೆ ಉಣ್ಣುವುದೇ ದೊಡ್ಡ ಚಿಂತೆಯಾಗಿರುತ್ತದೆ. ಅವರು ಹೊಟ್ಟೆಗಾಗಿ ದುಡಿಯುತ್ತಾರೋ ಅಥವಾ ತೊಡುಗೆಗಳಿಗಾಗಿ ಶ್ರಮಿಸುವರೋ ಹೇಳಲು ಬರುವುದಿಲ್ಲ.

ವಿವಾಹವಾದ ಸ್ತ್ರೀಗೆ ಮಾಂಗಲ್ಯವೇ ಭೂಷಣ. ತಾಳಿಯಿಲ್ಲದ ಬರೀ ಕೊರಳನ್ನು ಸಾಮಾನ್ಯವಾಗಿ ಯಾರೂ ನೋಡಲು ಇಷ್ಟಪಡುವುದಿಲ್ಲ. ಮದುವೆಯಾದ ಹೆಣ್ಣುಮಕ್ಕಳು

ಅವರವರ ಮನೆತನ, ಕುಟುಂಬದ ಸಂಪ್ರದಾಯಗಳಿಗನುಗುಣವಾಗಿ ತಾಳಿ ಹಾಕಿಕೊಳ್ಳುತ್ತಾರೆ. ತಾಳಿಯಿದ್ದ ಹೆಣ್ಣು ತಾಳ್ಮೆಯಿಂದ ಜೀವನ ಸಾಗಿಸುತ್ತಾಳೆ. 'ತಾಳಿ' ಹೆಣ್ಣಿಗೆ ಒಂದು ಬಗೆಯ ಸಂಯಮವನ್ನು ತಂದುಕೊಡುವುದರ ಜೊತೆಗೆ ಗೃಹಿಣಿ ಎಂಬ ಗೌರವವನ್ನು, ಪರಸ್ತ್ರೀ ಎಂಬ ಎಚ್ಚರಿಕೆಯನ್ನೂ ನೆನಪಿಸುತ್ತದೆ. ಆದರೆ ಕೆಲವು ಮನೆತನಗಳಲ್ಲಿ ತಾಳಿ ಧರಿಸುವ ಸಂಪ್ರದಾಯವೇ ಇರುವುದಿಲ್ಲ."[೨] ಅಂತಹವರನ್ನು ಕಂಡು ಈ ಮೇಲಿನ ಗಾದೆ ಹುಟ್ಟಿಕೊಂಡಿರಬೇಕು.

**೩. "ಕಡಗ ಇಕ್ಕಿದವಳು ಖಡ್ಗ ಹಿಡಿಯಲಾರಳೆ?**

ಹೆಣ್ಣು ಆದಿಶಕ್ತಿಯ ಅಪರಾವತಾರ, ದೈವೀಶಕ್ತಿಯಾದುದರಿಂದ ಅವಳನ್ನು ಆರಾಧಿಸಿ, ಗೌರವಿಸುತ್ತಾರೆ. ಹೆಂಗಸರಿರುವ ಮನೆಗಳಲ್ಲಿ ದೇವತೆಗಳು ನೆಲೆಸಿರುತ್ತಾರೆ. 'ಒಲಿದರೆ ನಾಲಿ ಮುನಿದರೆ ಮಾರಿ' ಎಂಬವ ಸಿದ್ಧಾಂತದ ಅಡಿಯಲ್ಲಿ ಹೆಣ್ಣು ತನ್ನ ನಡವಳಿಕೆಯನ್ನು ರೂಪಿಸಿಕೊಂಡಿದ್ದಾಳೆ. ನಮ್ಮ ಇತಿಹಾಸದ ಪುಟಗಳಲ್ಲಿ ಹೊರಾಡಿದ ಮಹಾನಿಯರಿದ್ದಾರೆ, ಪುರಾಣ ಕಥೆಗಳಲ್ಲಿ ಶ್ರೀ ಚಾಮುಂಡೇಶ್ವರಿ ದೇವಿ, ಮಹಿಷಾಸುರನನ್ನು ಸಂಹರಿಸಿ ಕಡಗದ ಕೈಲಿ ತಾನಿದ್ದ ಸ್ಥಳವನ್ನು ಆದಷ್ಟು ನಂದನವನವನ್ನಾಗಿಸಲು ಪ್ರಯತ್ನ ಪಡುವಂತಹವಳು. ಹೆಣ್ಣು ಕೇವಲ ಚಿನ್ನದ ದಾಸಳೇನಲ್ಲ. ಸಮಯ ಬಂದರೆ ತನ್ನ ಹೋರಾಟದ ಮನೋಭೂಮಿಕೆಯಿಂದ ಒಂದು ನಾಡನ್ನೇ ಕಟ್ಟಬಲ್ಲಷ್ಟು ಸಮರ್ಥಳಾಗಿರುತ್ತಾಳೆಂಬುದು ವೇದ್ಯವಾಗುತ್ತದೆ. ಆ ದಿಶೆಯಲ್ಲಿ ಹೆಣ್ಣು ಕುಟುಂಬದ, ಸಮಾಜದ ಕಣ್ಣೆಂದು ಬಲ್ಲವರು ಹೇಳುತ್ತಾರೆ."[೩]

**೪. "ತಾಯಿ ಬಯಸುವುದು ಒಡವೆ–ವಸ್ತ್ರ, ತಂದೆ ಬಯಸುವುದು ಆಸ್ತಿ–ಪಾಸ್ತಿ**

ಇಡೀ ಒಂದು ಕುಟುಂಬವನ್ನು ಈ ಗಾದೆ ಪ್ರಸಿದ್ಧನಿಸುತ್ತದೆ. ಮನೆಗಳಲ್ಲಿ ಹೆಂಗಸರ ವಲಯ ಒಂದು ಪರಿಮಿತಿಗೆ ಒಳಪಟ್ಟಿರುತ್ತದೆ. ಅವರಿಗೆ ಉಡುವ–ತೊಡುವ ಬಗೆಗಿನ ಆಸಕ್ತಿ, ಅಕ್ಷಯದಂತೆ ಇರುತ್ತದೆ. ಆಭರಣಗಳಿಗಾಗಿ ಆರ್ಥಿಕ ಬಲ ಸಂಗ್ರಹಕಾರ್ಯ ನಡೆಸಿ, ಇರುವೆಯಂತೆ ಒಂದೊಂದಾಗಿ ಎಲ್ಲವನ್ನು ಕೂಡಿಡುತ್ತಾಳೆ. ಮುಂದೆ ಇದು ತನ್ನ ಬದುಕಿಗೆ ಬೇಕಾಗುತ್ತದೆಂಬ ಆಶಯ ಭಾವ ಆಕೆಯದು. ಗಂಡಸರಿಗೆ ಮನೆ ಒಳಗಿನ ವ್ಯವಹಾರಕ್ಕಿಂತ ಹೊರಗಿನ ವ್ಯವಹಾರಗಳು ಜಾಸ್ತಿ. ಹಾಗಾಗಿ ಆತನು ತನ್ನ ಕುಟುಂಬವು ಭದ್ರತೆಗೆ ಹಾಗೂ ಮಕ್ಕಳ ಮುಂದಿನ ಭವಿಷ್ಯಕ್ಕಾಗಿ ಆಸ್ತಿ–ಪಾಸ್ತಿಯನ್ನು ಮಾಡುತ್ತಾನೆ."[೪]

**೫. "ಚಿನ್ನದ ಮೂಗು, ರನ್ನದ ಗಲ್ಲ, ನಿನ್ನ ಹೂತೆಯ ಕಂದ**

ಮಕ್ಕಳು ಹುಟ್ಟಿದರೆ ತಂದೆಯಂತೆಯೋ, ತಾಯಿಯಂತೆಯೋ ಕೆಲವೊಮ್ಮೆ ಅಜ್ಜಿ, ತಾತ, ಅಜ್ಜಿ, ಮುತ್ತಜ್ಜಿಯಂತೆಯೋ ಹುಟ್ಟಿರುತ್ತವೆ. ಗಂಡಾಗಲಿ, ಹೆಣ್ಣಾಗಲಿ ಅಪ್ಪನಂತಿದ್ದರೆ ನನ್ನ ಮಗು

ನನ್ನಂತೆ ಎಂದು ಹೆಮ್ಮೆಯಿಂದ ಬೀಗುತ್ತಾನೆ. ತಾಯಿಯಂತಿದ್ದರೆ ನಿನ್ನ ಮಗು ನೋಡು ಎನ್ನುತ್ತಾನೆ. ಮಕ್ಕಳನ್ನು ಆಭರಣಗಳ ಹೆಸರಿಂದ ಕರೆಯುವುದು ಸಾಮಾನ್ಯವಾದುದು. ಇಲ್ಲಿ ತಾಯಿಯೊಬ್ಬಳು ತನ್ನ ಮಗುವನ್ನು ಮುದ್ದು ಮಾಡಿರುವ ರೀತಿ ಆಕೆಯು ಮಗುವಿನ ಬಗ್ಗೆ ಇಟ್ಟಿರುವ ಮಮಕಾರ, ವಾತ್ಸಲ್ಯವನ್ನು ತೋರಿಸುತ್ತದೆ. ತಾಯಿ-ಮಗುವಿನ ಅನ್ಯೋನ್ಯ ಸಂಬಂಧವನ್ನು ಇದು ತಿಳಿಸುತ್ತದೆ."[೫]

೬. "ಮುತ್ತು ಕಳೆದರೆ ಸಿಕ್ಕಬಹುದು; ಹೊತ್ತು ಕಳೆದರೆ ಸಿಕ್ಕುವುದೇ!

ಇದು ತುಂಬಾ ಮಾರ್ಮಿಕವಾದ ಗಾದೆ. ಬದುಕಿನಲ್ಲಿ ನಾವು ಪಡೆಯುವುದಕ್ಕಿಂತ ಕಳೆದುಕೊಳ್ಳುವುದೇ ಜಾಸ್ತಿ. ಕಳೆದುಕೊಂಡದ್ದನ್ನೇ ಮರಳಿ ಪಡೆಯಲು ಸಾಧ್ಯವಿಲ್ಲ. ಆದರೆ ಕಳೆದ ವಸ್ತುವಿಗೋ, ವ್ಯಕ್ತಿಗೋ ಪರ್ಯಾಯವಾಗಿ ನಮ್ಮ ಮನಸ್ಸಿನ ತಾತ್ಕಾಲಿಕ ಸಂತೋಷಕ್ಕಾಗಿ ಯಾರಾದರೂ ಸಿಗಬಹುದು. ಮುತ್ತು ಚಿನ್ನದೊಂದಿಗೆ ಸೇರಿ ಯಾವುದಾದರೊಂದು ಆಕಾರ ಪಡೆಯುವಂತಿಹುದು. ಅದು ಓಲೆಯೋ ಮೂಗುತಿಯೋ, ಬಳೆಯೋ, ಸರವೋ ಆಗಬಹುದು. ಅಂತಹುದನ್ನು ಕಳೆದುಕೊಂಡರೆ ಅಂಗಡಿಗೆ ಹೋಗಿ ಮತ್ತೆ ತರಬಹುದು. ಆದರೆ ಸಮಯ ಎಂಬುದು ಮುತ್ತು, ರತ್ನ, ಚಿನ್ನ, ಬಂಗಾರ, ಬೆಳ್ಳಿಗಿಂತಲೂ ಅಮೂಲ್ಯವಾದುದು. ಒಮ್ಮೆ ಕಳೆದು ಹೋದ ಸಮಯವನ್ನು ಮತ್ತೆ ಹಿಂತಿರುಗಿಸಿ ಪಡೆಯಲು ಬದುಕಿನಲ್ಲಿ ಯಾರಿಗೂ ಸಾಧ್ಯವಿಲ್ಲ."[೬] ಆದುದರಿಂದ ಕಾಲಹರಣ ಮಾಡದೇ ಸಮಯವನ್ನು ಸದುಪಯೋಗ ಮಾಡಿಕೊಳ್ಳಬೇಕು.

೭. ಮಂಗನ ಕೈಗೆ ಮಾಣಿಕ್ಯ ಕೊಟ್ಟಂತೆ

ಇದೊಂದು ಕನ್ನಡದ ಜನಪ್ರಿಯ ಗಾದೆಯ ಮಾತು. ಹಣಕಾಸಿನ ವಿಷಯದಲ್ಲಿ ಮಾಣಿಕ್ಯದ ಬೆಲೆ ಮತ್ತು ಸಾಮಾಜಿಕ ನೆಲೆಯಲ್ಲಿ ಮಾಣಿಕ್ಯದ ಮೌಲ್ಯ ಅತ್ಯುನ್ನತವಾದುದು. ಇದಕ್ಕೆ ಹೋಲಿಸಿದರೆ ಮಂಗನ ಸ್ಥಾನಮಾನ ಅತ್ಯಂತ ಕನಿಷ್ಠವಾದುದು. ಮಾಣಿಕ್ಯಕ್ಕೆ ಅದರದ್ದೇ ಆದ ಶ್ರೇಷ್ಠತೆಯನ್ನು ಸಮಾಜದಲ್ಲಿ ಕೊಡಲಾಗಿದೆ. ಇದಕ್ಕೆ ವಿರುದ್ಧವಾಗಿ ಮಂಗನಿಗೆ ಚೇಷ್ಟೆ, ಶಿಸ್ತು ಇಲ್ಲದಿರುವಿಕೆ ಇತ್ಯಾದಿ ನಕಾರಾತ್ಮಕ ಲಕ್ಷಣಗಳನ್ನು ಆರೋಪಿಸಲಾಗಿದೆ. ಒಂದರದ್ದು ಶ್ರೇಷ್ಠವಾದುದು, ಮತ್ತೊಂದರದ್ದು ಕನಿಷ್ಠವಾದುದು. ಈ ಎರಡನ್ನೂ ಒಂದು ಕಡೆ ತಂದು ಮೇಲಿನ ಗಾದೆಯಲ್ಲಿ ಹೋಲಿಸಲಾಗಿದೆ.

ಈ ಎರಡರಲ್ಲಿ ಈ ಗಾದೆಯು ಯಾವುದಕ್ಕೆ ಅತಿ ಮಹತ್ವವನ್ನು ಕೊಡುತ್ತಿದೆ ಎಂಬುದು ಆಲೋಚಿಸಬೇಕಾದ ವಿಷಯ. ಮಾಣಿಕ್ಯದ ಮಹತ್ವವನ್ನು ಮತ್ತು ಅದರ ಶ್ರೇಷ್ಠತೆಯನ್ನು ಎತ್ತಿ ತೋರಿಸಬೇಕು ಎಂಬುದು ಇದರ ಹಿಂದಿರುವ ಉದ್ದೇಶ. ಹಾಗಾಗಿ ಅದನ್ನು ಯಾವುದಕ್ಕಾದರೂ

ಹೋಲಿಸಲೇಬೇಕು. ಒಂದು ವಸ್ತುವಿನ ಮಹತ್ವವನ್ನು ಹೆಚ್ಚು ಎಂದು ಹೇಳಬೇಕಾದರೆ ಅದನ್ನು ಮತ್ತೊಂದು ವಸ್ತುವಿನೊಂದಿಗೆ ಹೋಲಿಸುವುದು ಮಾನವರ ಆಲೋಚನೆಯ ಸಾಮಾನ್ಯ ಸ್ವಭಾವ. ಹಾಗೆ ಹೋಲಿಸದಿದ್ದರೆ ಅದರ ಬೆಲೆಯ ಶ್ರೇಷ್ಠತೆ ಮತ್ತು ಮಹತ್ವ ಗೊತ್ತಾಗುವುದೇ ಇಲ್ಲ. ಉದಾಹರಣೆಗೆ, 'ಅವಳು ಒಳ್ಳೆಯವಳು' ಎಂದು ಹೇಳಿದರೆ ಏನನ್ನೂ ಹೇಳಿದಂತೆ ಆಗುವದಿಲ್ಲ. ಅದರ ಬದಲು 'ಅವಳು ಇವಳಿಗಿಂತ ಒಳ್ಳೆಯವಳು' ಎಂದು ಹೇಳಿದರೆ ಅವಳ ಬೆಲೆ ಏನೆಂದು ಗೊತ್ತಾಗುತ್ತದೆ. ಇದು ಹೋಲಿಕೆಯನ್ನು ಆಧರಿಸಿದ ಸಂಗತಿ.

ಅದೇ ರೀತಿಯಲ್ಲಿ ಈ ಗಾದೆಯು ಮಾಣಿಕ್ಯದ ಬೆಲೆಯನ್ನು ಎತ್ತಿ ಹೇಳುವ ಸಲುವಾಗಿ ಅದನ್ನು ಮಂಗನ ಜೊತೆ ಹೋಲಿಸಿದೆ. ಈ ಗಾದೆಯ ಮತ್ತೊಂದು ವಿಶಿಷ್ಟತೆ ಏನೆಂದರೆ, ಇದು ಒಡವೆಯನ್ನು ಒಂದು ಪ್ರಾಣಿಯ ಜೊತೆ ಹೋಲಿಸಿರುವುದು. ಒಡವೆ ಒಂದು ವಸ್ತು. ಈ ವಸ್ತುವನ್ನು ಮತ್ತೊಂದು ವಸ್ತುವಿನ ಜೊತೆ ಹೋಲಿಸಬಹುದಿತ್ತು. ಆದರೆ ಇದು ಒಂದು ಪ್ರಾಣಿಯನ್ನು ಇಲ್ಲಿ ಹೋಲಿಕೆಗೆ ತಂದಿದೆ. ಯಾಕೆ ಎಂದರೆ, ಮಂಗನ ಕೈಗೆ ಯಾವುದೇ ವಸ್ತುವನ್ನು ಕೊಟ್ಟರೂ ಕೂಡ ಅದು ಆ ವಸ್ತುವನ್ನು ಮೊದಲು ತಿನ್ನಲು ಪ್ರಯತ್ನಿಸುತ್ತದೆ. ಆಗದಿದ್ದರೆ ಅದನ್ನು ಹರಿದೋ, ಪುಡಿ ಮಾಡಿಯೋ ಎಸೆಯುತ್ತದೆ. ಮಾಣಿಕ್ಯವು ಸಮಾಜದಲ್ಲಿ ಹೆಚ್ಚು ಗೌರವದ ಸ್ಥಾನದಲ್ಲಿರುವಂತಹದ್ದು. ಅದನ್ನು ನಿಗದಿತ ಸಂದರ್ಭಗಳಲ್ಲಿ ಹಾಕಿಕೊಳ್ಳಬೇಕು. ಆಗ ಒಂದು ಕಡೆ ಮಾಣಿಕ್ಯಕ್ಕೂ, ಮತ್ತೊಂದು ಕಡೆ ಅದನ್ನು ಧರಿಸಿದವರಿಗೂ ಒಂದು ಘನತೆಯನ್ನು ತಂದು ಕೊಡುತ್ತದೆ.

"ಅಡಿಕೆ ಹುಡುಕುತ್ತಿದ್ದೋನಿಗೆ ಮಾಣಿಕ್ಯ ಸಿಕ್ಕಂತೆ.

ಅನ್ನದಲ್ಲಿ, ಚಿನ್ನದಲ್ಲಿ ಬಡವರಾದ್ರೆ, ಕುಲದಲ್ಲೂ ಬಡವರಾ?.

ಅನ್ನವೇ ಇಲ್ಲ, ಚಿನ್ನ ಇದೆಯೇ?.

ಅನ್ನ ಇದ್ರೆ ಆಳು, ಚಿನ್ನ ಇದ್ರೆ ಹೋಳು.

ಅರಗು ಬಂಗಾರ ತಿಂತು, ತನ್ನ ಕೇಡು ತನ್ನನ್ನೇ ತಿಂತು.

ಅಕ್ಕಸಾಲಿಗನನ್ನು ಕಂಡರೆ ಕಪ್ಪೆಯೂ ಮೂಗುತಿ ಬೇಡಿತಂತೆ.

ಅಂಗಾರಕ್ಕೆ ಶೃಂಗಾರ ಹೆಚ್ಚು.

ಅಕ್ಕಸಾಲೆ ಕಿವಿ ಚುಚ್ಚಿದ್ರೆ ನೊಚ್ಚಗಾಯ್ತದೆ.

ಅತ್ತರೆ ಮುತ್ತು ಸುರಿಯುತ್ತೆ?.

ಆಲೆಗೆ ಓಲೆಯಿದೆ, ಕೊರಳಿಗೆ ತಾಳಿ ಇದೆ.

ಆರು ಸೇರು ಹರಳು, ಮೂರು ಸೇರು ಬೆಳ್ಳಿ.

ಆಚಾರಿಗೆ ಅಂಗಾರ, ಆಚಾರಿ ಹೆಂಡ್ತಿಗೆ ಬಂಗಾರ.

ಉಂಗುರ ಹಾಕಿದ ಕೈಯಲ್ಲಿ ಹೊಡೆದರೆ ನೋವಿಲ್ಲವಂತೆ.

ಒಡೆದ ಮುತ್ತು ಕಳೆದ ಹೊತ್ತು.

ಒಡವೆ ನನ್ನದಲ್ಲ ಆದರೆ ಒಡಲು ನನ್ನದಲ್ಲವೇ?.

ಒಡವೆ ಆಸೆಗೆ ಒಡಲು ಮಾರಿದಳು.

ಓಲೆಯಂತೆ ಮಾಲೆ, ಸೀರೆಯಂತೆ ಪೀಠ

ಕತ್ತೆಗೇಕೆ ಕಡಿವಾಣ, ತೊತ್ತಿಗೇಕೆ ಮೂಗೂತಿ?.

ಕಂಡ ಕೈಗೇಕೆ ದುಂಡು ಕಡಗ?.

ಕಂಚನ್ನು ಹಾಕಿದರೆ ಬಿಳಿಚಿನ್ನ ಬತ್ತದೆಯೆ.

ಕಬ್ಬುಗಾತ್ರದ ಮುತ್ತು ಮೂಗುತಿಗಾದಿತೇ?.

ಕಳ್ಳನ ಕೈಗೆ ಒಡವೆ ಕೊಟ್ಟ ಹಾಗೆ?.

ಕಳ್ಳನಿಗೆ ಸದರ ಕೊಟ್ರೆ ಒಡವೆಗೆ ಕೈಯಿಕ್ಕಿದ.

ಕಳ್ಳನ ಹೆಂಡತಿಗೆ ಕರಿಮಣಿಯೇ ಆಧಾರ.

ಕಾಗೆ ಕೊಳ್ಳಿಗೆ ಗೆಜ್ಜೆ ಕಟ್ಟಿದ್ಹಾಂಗೆ.

ಕತ್ತೆಗೇಕೆ ಕಾಲ್ಗಡಗ.

ಕಾಲಿಗೆ ಬಿದ್ದು ಕಾಲುಂಗುರ ಬಿಚ್ಚಿಕೊಂಡರಂತೆ.

ಕಿವಿಕಿತ್ತು ಬೆರಳಿಗೆ ಉಂಗುರ ಹಾಕಿದಂಗ.

ಕುಣಿಯೋರ ಕಾಲಿಗೆ ಗೆಜ್ಜೆ ಕಟ್ಟಿದ ಹಾಗೆ.

ಕುಂಟ ಕಾಲಿಗೊಂದು ಕೊಣಮಿಣಿ ಗೆಜ್ಜೆ.

ಕುಂಟಿಯಾಗಲಿ, ಕುರುಡಿಯಾಗಲಿ ತಾಳಿ ಕಟ್ಟಿದವಳು ಲೇಸು.

ಕುಳಿತು ಉಂಡರೆ ಕುಡಿಕೆ ಹೊನ್ನು ಸಾಲದು.

ಕೂಸು ಅತ್ತರೆ ಮುತ್ತು, ನಕ್ಕರೆ ಸ್ವರ್ಗ.

ಕೈನೋಡಿ ಕಂಕಣ ಕಟ್ಟು.

ಕೋರಿ ಕೈಗೆ ಬಳೆ ಚಂದ.

ಕೋತಿ ಬಲ್ಲುದೆ ಮುತ್ತಿನ ಬೆಲೆಯ?

ಮಂಗನ ಕೈಗೆ ಮಾಣಿಕ್ಯ ಕೊಟ್ಟಂತೆ.

ಕಾಸುತೂಕದ ಬೆಳ್ಳಿ ಇಲ್ಲ, ಮೀಸೆ ತೂಕದ ಚಿನ್ನ ಇಲ್ಲ.

ಕಾಲುಂಗುರದಾಕಿ ಹೋದರೆ ಕಾಲು ಕಡಗದಾಕೆ ಬತ್ತಾಳೆ.

ಕಾಸಿಗೊಂದು ಕೂಸಾದರೆ ಏಸೇಸು ಮುತ್ತು?.

ಗುಂಡೋ ಮುತ್ತಿನ ಚಂಡೋ?.

ಗಂಡ ಸತ್ತರೆ ಸಾಯಲಿ ಕಿವಿಗೊಂದು ಓಲೆಯಾದರೆ ಸಾಕು.

ಗಾಣದೆತ್ತಿಗೆ ಗೆಜ್ಜೆಯಾಕೆ?.

ಗೆಜ್ಜೆ ಕಟ್ಟಿದ ಮ್ಯಾಲೆ ಲಜ್ಜೆಯಾಕೆ?.

ಚಿನ್ನ ನಮ್ಮದಾದರೆ ಚಿನಿವಾರ ನಮ್ಮವನೇ?.

ಚಿನ್ನಕ್ಕೆ ಮರುಳಾದವಳು ಅನ್ನಕ್ಕೆ ಮರುಳಾದಳಾ?.

ಚಿನ್ನದ ಸೂಜಿ ಅಂತ ಕಣ್ಣಿಗೆ ತಿವಿಯೋಕಾಗುತ್ತೇ?.

ಚಿನ್ನದ ಕತ್ತಿ ಅಂತ ಕೊರಳು ಕೊಯ್ಯೋಕಾಗುತ್ತೇ?.

ಚಿನ್ನದ ಒಡವೆ ಇಟ್ಟ ಹೆಣ್ಣು ಚಿಲ್ರೆ ಅಂಗ್ಡಿಯವ್ನ ಒಲಿದಳೇ?.

ಚಿನ್ನದಂಥ ಮಕ್ಕಳು ಹೆಣ್ಣಾದರೇನು, ಗಂಡಾದರೇನು?.

ತಲೆನೋವು ರೋಗವಲ್ಲ, ತಾಳಿ ಒಡವೆಯಲ್ಲ.

ತನ್ನ ಕೆಲಸ ಹೊನ್ನು, ಮಗಳ ಕೆಲಸ ಮಾಣಿಕ್ಯ.

ತಾಳಿ ಮಣಿ ಮೇಲೆ ಬ್ಯಾಳಿ ಮನೆಯಿಲ್ಲ.

ತಾಳಿ ಇಕ್ಕೋತನಕ ತಾಳ್ನಾರೆ, ವಾಲೆ ಇಕ್ಕೋತನಕ ಬಾಳ್ನಾರೆ.

ತಿಪ್ಪೆ ಮೇಲೆ ಚಿನ್ನ ಬಿದ್ದರೆ ಅದರ ಮೌಲ್ಯ ಹೋದೀತೇ?.

ತೊತ್ತಿಗ್ಯಾಕೆ ಮುತ್ತಿನಾಭರಣ.

ಧನದಾನ್ಯವಲ್ಲ ಕಂಚು ಒಡವೆಯಲ್ಲ.

ನವರತ್ನವಾದರೂ ಚಿನ್ನವನ್ನು ಅಪೇಕ್ಷಿಸುತ್ತದೆ.

ನರಳಿದರೆ ಹರಳು ಸಿಕ್ಕೀತೆ?.

ನತ್ತಿಗೆ ಮುತ್ತು ಸುರಿಯುತ್ತದೆಯೇ?.

ನಾಗರಹಾವಿನ ತಲೇಲಿ ಮಾಣಿಕ್ಯ ಇದ್ದಂಗೆ.

ನಿದ್ದೆಗೆ ಮದ್ದಿಲ್ಲ, ವಜ್ರಕ್ಕೆ ಬೆಲೆಯಿಲ್ಲ.

ನೀಲದಮಣಿ ಬೇಕಾದರೆ ನೀಲಗಿರಿಗೆ ಹೋಗಬೇಕು?.

ನೊಣ ಒಂದು ಪ್ರಾಣಿಯಲ್ಲ, ಬುಗುಡಿ ಒಂದು ಒಡವೆಯಲ್ಲ.

ನುಗ್ಗೆ ಮರಕ್ಕೆ ತಾಳಿ ಕಟ್ಟಿ ಬಗ್ಗಿಸಿದ ಹಾಗೆ.

ಪುಣ್ಯವಂತ ಮುಟ್ಟಿದ್ದೆಲ್ಲ ಚಿನ್ನ.

ಬಡವಿಗೇಕೆ ಒಡವೆ ಚಿಂತೆ?.

ಬಡಮುತ್ತೈದೆಗೇಕೆ ಇಜ್ಜೋಡಿನ ಕರಿಮಣಿ.

ಬಡವರ ಬಾಳು ಉಡಿದಾರಕ್ಕೆ ಹತ್ತೀತು.

ಭಂಗಿ ಬಂಗಾರ, ಸಾರಾಯಿ ಸಂಸಾರ.

ಬಂಗಾರಕ್ಕಾದರೂ ತಾಮ್ರದ ನೆರವು ಬೇಕು.

ಬಂಗಾರವೇ ಒಂದು ಒಡವೆ.

ಬಂಗಾರಕ್ಕೆ ಅಂಗಾರವೇ ಸಾಕ್ಷಿ.

ಬಂಗಾರವಿಲ್ಲದೆ ಅದೆಂಥ ಶೃಂಗಾರ?.

ಬಂಗಾರದಂಥ ಗಂಡನ್ನ ಕಟ್ಟಿಕೊಂಡು ಅಂಗಾರ ಯಾಕೆ?.

ಬಂಜೆ ಮನೆ ಬಾಗಿಲಲ್ಲಿ ಬಂಗಾರದ ಒಳಕಲ್ಲು ಇದ್ದ ಹಾಗೆ!.

ಬೀಗತಿ ಇಲ್ಲದ ಮನೆ, ಮೂಗುತಿ ಇಲ್ಲದ ಮೋರೆ.

ಬಿತ್ತಾರದ ಗಂಡ ಬಿಚ್ಚೋಲೆ ತಂದು ಇಕ್ಕೋ ಅಂತ ಇರುಳೆಲ್ಲ ತಿವಿದ.

ಮಾತು ಮುತ್ತಿಗೂ ಮೂಲ, ಕುತ್ತಿಗೆಗೂ ಮೂಲ.

ಮಾತು ಬಲ್ಲೋನು ಉಂಡು ಬಂದ ಮಾಣಿಕ್ಯ ಉಳ್ಳೋನು ಹಸಗೊಂಡು ಬಂದ.

ಸೆಜ್ಜೆಸಾಲಿನ ಹೊಲ ಚಂದ, ಗೆಜ್ಜೆ ಕಾಲಿನ ಮಗ ಚಂದ.

ಉಂಗುರ ಕೊಡಲಾರದ ಮಾವ ಬಂಗಾರ ಸಿಗಲಿಲ್ಲ ಅಂದ.

ನೀನು ಓಲೆ ಕಿವಿಯವಳನ್ನು ನೋಡಿದರೆ ನಾನು ಒಂಟಿ ಕಿವಿಯವನನ್ನು ನೋಡ್ತೀನಿ.

ಸಾಲ ಮಾಡಿ ಓಲೆ ಮಾಡಿಸಿದ. ಓಲೆ ಮಾರಿ ಬಡ್ಡಿ ತೀರಿಸಿದ.

ಒಕ್ಕಲಿಗನ ನೆಂಟು ಒಡವೆ ಕೇಡು.

ಅಗಸ ಮಾಡಿದ್ದು ಬಟ್ಟೆಗೆ, ಅಕ್ಕಸಾಲಿ ಮಾಡಿದ್ದು ಅಗ್ಗಿಷ್ಟೆಕೆಗೆ.

ಅಕ್ಕನ ಚಿನ್ನವಾದ್ರೂ ಅಕ್ಕಸಾಲಿ ಬಿಡಲ್ಲ."[೭]

ಹೀಗೆ ಹಲವಾರು ಪ್ರಕಾರದ ಗಾದೆಗಳು ಅಂದಿನಿಂದ ಇಂದಿನವರೆಗೆ ಪ್ರಸ್ತುತವಾಗಿರುವುದನ್ನು ನೋಡಬಹುದು. ಗಾದೆಗಳು ತಾವಿರುವ ಸ್ಥಳದಲ್ಲೇ ತಿರುಗುತ್ತವೆ. ಯಾವುದಾದರೊಂದು ಪ್ರದೇಶಕ್ಕೆ ಮಾತ್ರ ಸೀಮಿತಗೊಂಡಿರುತ್ತವೆ ಎಂದು ಹೇಳಲಾಗುವುದಿಲ್ಲ. ಇವು ಒಂದು ಕಡೆಯಿಂದ ಮತ್ತೊಂದು ಕಡೆಗೆ ವಲಸೆಹೋಗುವಂತದ್ದಾಗಿವೆ. ಹಾಗೆಯೆ ಹಲವು ಭಾಷೆಯ ಜನರೊಡನೆ ಗೊತ್ತಿಲ್ಲದಂತೆ ಸೇರಿ ಹೋಗುತ್ತವೆ. ಕತೆ, ಕಾವ್ಯ, ಪುರಾಣಗಳಲ್ಲಿಯೂ ಸಹ ಗಾದೆಗಳು ಮಹತ್ವದ ಸ್ಥಾನವನ್ನು ಪಡೆದುಕೊಂಡಿವೆ. ಗಾದೆಗಳು ಪ್ರತಿಯೊಬ್ಬರ ಜೀವನದಲ್ಲಿ ಮಾರ್ಗಸೂಚಿಯಾಗಿ, ಮೌಲ್ಯಗಳ ಕುರಿತಾಗಿ, ಎಚ್ಚರಿಕೆಯ ಸಂಕೇತವಾಗಿ ಸಂದೇಶಗಳನ್ನು ಸಾರಿವೆ.

### ೪.೪. ಒಗಟುಗಳು

ಜನಸಾಮಾನ್ಯರ ಬದುಕಿನಲ್ಲಿ ಒಗಟುಗಳು ಗಾದೆಗಳಷ್ಟೇ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಅವರ ಜೀವನಾವರ್ತನೆಯ ಆಚರಣೆ, ಸಂಪ್ರದಾಯ, ಹುಟ್ಟು-ಸಾವು ಇನ್ನಿತರೆ ಸಂದರ್ಭಗಳಲ್ಲಿ ಒಗಟುಗಳ ಬಳಕೆಯನ್ನು ನಾವು ಕಾಣಬಹುದು. ಅನಕ್ಷರಸ್ಥರೆಂದು ಪರಿಗಣಿಸುವ ಜನಪದರಲ್ಲಿ ಈ ಒಗಟುಗಳು ಹಾಸುಹೊಕ್ಕಾಗಿರುವುದು ಅವರ ಬುದ್ಧಿಮತ್ತೆಗೆ ಹಿಡಿದ ಕನ್ನಡಿಯಾಗಿದೆ.

ಗಾದೆ ಒಂದೋ ಎರಡೋ ಸಾಲುಗಳಿಗೆ ಸೀಮಿತವಾಗಿದ್ದರೆ, ಒಗಟಿನ ವ್ಯಾಪ್ತಿ ಒಂದು ಸಾಲಿನಿಂದ ಅನೇಕ ಸಾಲುಗಳಿರುತ್ತವೆ. ಗ್ರಾಮೀಣ ಜನ ಮುಗ್ದರಾಗಲಿ ಅಪ್ರಬುದ್ಧರಾಗಲಿ ಅಲ್ಲ. 'ಕುರಿತೋದದೆಯು ಪರಿಣತಮತಿಗಳು' ಎಂಬುದನ್ನು ಒಗಟುಗಳು ಸಾರುತ್ತವೆ.

ಒಗಟುಗಳ ಅಧ್ಯಯನವು ಸಾಹಿತ್ಯದ ದೃಷ್ಟಿಯಿಂದ ಮಾತ್ರವಲ್ಲ, ಭಾಷಿಕ, ಸಾಮಾಜಿಕ ದೃಷ್ಟಿಯಿಂದಲೂ ಬಹು ಮುಖ್ಯ. ಜನಸಾಮಾನ್ಯರ ಒಗಟುಗಳು ಕೇವಲ ಮನರಂಜನೆಗಾಗಿ, ವಿನೋದಕ್ಕಾಗಿ ಹುಟ್ಟಿಕೊಂಡಿದ್ದರೂ ಕೆಲವು ಜನಾಂಗದ ಜೀವನದಲ್ಲಿ ಅವು ಗಂಭೀರ ಪಾತ್ರ ವಹಿಸಿರುವುದುಂಟು. ಜಗತ್ತಿನಾದ್ಯಾಂತ ಕಂಡುಬರುವ ಈ ಪ್ರಕಾರ ವಿಶಿಷ್ಟವಾದುದು, ವೈವಿಧ್ಯದಿಂದ ಕೂಡಿರುವಂಥದ್ದಾಗಿದೆ.

ಗದ್ಯ ಪದ್ಯಗಳೆರಡರಲ್ಲೂ ರಚನೆಗೊಂಡಿರುವ ಈ ಒಗಟುಗಳು ದೊಡ್ಡವರಿಗಿಂತ ಮಕ್ಕಳಿಗೆ ಪ್ರಿಯವಾಗುತ್ತವೆ. ಒಗಟನ್ನು ಕನ್ನಡದಲ್ಲಿ ಒಂಟು, ಒಡಪು, ಒಗಟು, ಒಡಗತೆ, ಒಡಚೊಕತೆ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಹಾಗೆಯೇ ಪ್ರಾಚೀನ ಕಾವ್ಯದಲ್ಲಿ ಮುಂಡಿಗೆ ಮುಡಿಗೆ ಎಂಬ ಪದ ಪ್ರಯೋಗಗಳಿವೆ.

ಕಾಮನಬಿಲ್ಲು ಸೌಂದರ್ಯಪ್ರಜ್ಞೆವುಳ್ಳ ಜನಪದ ಕವಿಯೊಬ್ಬ ವರ್ಣಿಸುವ ಬಗೆ ಇದು. ಹಾಗೆ ಒಂದೊಂದೆ ಶಬ್ದಗಳಿಂದ ರೂಪುಗೊಂಡ ಒಗಟುಗಳು ಭಾಷಾದೃಷ್ಟಿಯಿಂದಲೂ ಮಹತ್ವ ಪಡೆಯುತ್ತವೆ.

"ಒಗಟುಗಳ ಮಹತ್ವ ಅವುಗಳನ್ನು ರೂಢಿಸಿ ಬಳಸುವ ಜನತೆಯು ನಂಬಿಕೆ, ಆಸಕ್ತಿ ಹಾಗೂ ಸಂಸ್ಕೃತಿಯನ್ನು ಅವಲಂಬಿಸಿರುತ್ತದೆ. ಜೀವನದಲ್ಲಿ ಒಂದೂ ಒಗಟನ್ನು ಬಳಸದೆಯೇ ಈಗ ಬದುಕುವುದು ಒಬ್ಬೊಬ್ಬರಿಗೆ ಸಾಧ್ಯವಾಗಬಹುದು. ಆದರೆ ಹಿಂದಿನ ಯುಗಗಳಲ್ಲಿ ಈ ಸೌಲಭ್ಯವಿರಲಿಲ್ಲ. ಸಾಹಿತ್ಯ ಪುರಾಣಗಳನ್ನು ತಿಳಿದು ಅದರಲ್ಲಿನ ಗಹನವಿಷಯಗಳನ್ನು ಕುರಿತು ಚರ್ಚಿಸುವ, ವ್ಯಾಖ್ಯಾನಿಸುವ, ಉಪನ್ಯಾಸ ನೀಡುವ ಸಂಪ್ರದಾಯ ಹಿಂದೆ ಇತ್ತು. ಆಗ ಅನಿವಾರ್ಯವಾಗಿ ಗಾದೆ, ಒಗಟುಗಳ ಪ್ರಸ್ತಾಪ ಒಂದೇ ಬರುತ್ತಿತ್ತು."[೮] ಒಂದು ಒಗಟಿಗೆ ಒಂದೇ ಅರ್ಥ ಇರಬೇಕೆಂದಿಲ್ಲ. ಅದು ಬೇರೆ ಬೇರೆ ರೀತಿಯಲ್ಲಿ ಅನೇಕಾರ್ಥಗಳನ್ನು ಒಳಗೊಂಡಿರಬಹುದಾಗಿದೆ. ಮಾನವರ ಕಲ್ಪನೆ ವಿಕಾಸವಾಗಿ ಒಗಟಿನ ಅರ್ಥ ವ್ಯಾಪಕವಾಗುತ್ತಾ ಹೋಗುತ್ತದೆ.

"ಒಂಟೊಂಟು ಒಡಿನ ಗಂಟು

ನಂಟಿಪುರ ನಾಗಮಂಗಲ

ಒಡಿಸಿದಂತ ಭೂಪನಿಗೆ

ಎಂಟು ರೊಟ್ಟಿ ಒಂದು ಸೋಲಿಗೆ ತುಪ್ಪ–ಜಡೆಬಿಲ್ಲೆ

ಇದು ಪ್ರಾಚೀನ ಕಾಲದ ಒಡವೆ. ಇದು ತಲೆಗೆ ಸಂಬಂಧಪಟ್ಟಂತಹ ಆಭರಣಗಳ ಬಗೆಗಿನ ಒಗಟಾಗಿದೆ. ಪದಕದ ಶೈಲಿಯ ಈ ಒಡವೆಯನ್ನು ತಲೆಯ ಮೇಲೆ ಹಾಕಿಕೊಳ್ಳುವರು ಅದಕ್ಕೆ ಕೊಂಡಿ ಮಾಡಿರುತ್ತಾರೆ. ಮುಂದಲೆ ಹೂಗಳಾದ ಸೂರ್ಯ–ಚಂದ್ರ ಆಕೃತಿಯ ಜಡೆಬಿಲ್ಲೆಗಳನ್ನು ಪ್ರಮುಖವಾಗಿದ್ದವು. ಇದನ್ನು ವಿಶೇಷ ಸಂದರ್ಭದಲ್ಲಿ ಮಾತ್ರ ಹಾಕಿಕೊಳ್ಳುತ್ತಿದ್ದರು. ಇದನ್ನು ಭರತನಾಟ್ಯ ಮಾಡುವ ಸ್ತ್ರೀ ಹಾಕಿಕೊಳ್ಳುತ್ತಾಳೆ.

ಬೆಂಕಿಲಿ ಬೆಂದಕಾಯಿ

ಜಾಣ ತಂದ ಕಾಯಿ

ಜಾಣೆ ಮುಡಿದ ಕಾಯಿ–ಕುಪ್ಪಿಗೆ''

ಕುಪ್ಪಿಗೆ ಎಂದರೆ 'ಚೌಲಿಕಟ್ಟೆ'ಂದು ಕರೆಯುತ್ತಾರೆ. ಗೋಪುರದ ಕಳಸವನ್ನೇ ಹೋಲುವ ಈ ಒಡವೆಯನ್ನು ಸಾಮಾನ್ಯವಾಗಿ ವಯಸ್ಸಾದವರು ಕೃತಕ ಕೂದಲಾದ ಚೌರಿಗೆ ಈ ಕುಪ್ಪಿಗೆಯನ್ನು ಜೋಡಿಸಿ ಚೌಲಿಕಟ್ಟೆಯನ್ನು ಹಾಕಿಕೊಳ್ಳುತ್ತದೆ. ಇದು ಆಕರ್ಷಕ ಚಿತ್ತಾರದಿಂದ ಕೂಡಿರುತ್ತದೆ.

"ಏಳು ತಲೆ ಸರ್ಪ

ಕಚ್ಚೋದಿಲ್ಲ, ತೆಗೆಯಬಹುದು–**ಜಡೆನಾಗರ**

ಮೇಲ್ಕುತವರೆಲ್ಲ ದಪ್ಪಗಿರುತ್ತಾರೆ

ಕೆಳಗಿರೊರೆಲ್ಲ ಅವರ್ಗಿಂತ ಸಣ್ಣ–**ಜಡೆ ಹೂಗಳು**

ಕೆಳಗಿಂದ ಮೇಲಕ್ಕೆ

ಮೇಲಿಂದ ಕೆಳಕ್ಕೆ

ಸುತ್ತಾಕಿ ತೆಪ್ಪಗೆ ಕೂರ್ತವೆ–ಜಡೆಸರ

೩. ಆಲೆ ಮೇಲೆ–ಉರಿಯೋದೇನು?–**ಓಲೆ**

ನಮ್ಮ ಭಾರತೀಯ ಸಂಪ್ರದಾಯದಲ್ಲಿ ಓಲೆಗೆ ವಿಶೇಷಸ್ಥಾನವಿದೆ. ಇದು ಮುತ್ತೈದೆಯ ಸಂಕೇತ. ಕಿವಿಯ ತೂತನ್ನು 'ಹಾಲೆ' ಎನ್ನುತ್ತಾರೆ. ಹಾಲೆ ಮೇಲೆ ಏಳು ಹರಳಿನ ದಪ್ಪ ಓಲೆಯನ್ನು ಹಾಕಿಕೊಳ್ಳುತ್ತಾರೆ

ಅಂತಕ್ಕನ ಮಗಳು ಅಂತರದಲ್ಲಿ ಓಲಾಡ್ತಾಳೆ–**ಲೋಲಾಕು/ಜುಮುಕಿ**

ವ್ರತದ ಹೂವು ಕಂಡ

ಮುತ್ತಿನ ಭರಣಿ ಕಂಡ

ಅಲ್ಲೊಂದು ರಂಧ್ರ ಕಂಡ

ಅಲ್ಲೆ ಕೂತ್ಗಂಡ–**ಬುಗುಡಿ**

ಗುಣಿ ಕಟ್ಟಬಹುದು

ಗೊಬ್ಬರ ಹಾಕಬಹುದು

ತಿನ್ನೋದಲ್ಲ ಉಣ್ಣೋದಲ್ಲ

ಮಾತ್ರ ಅದು ಬೇಕು–**ಹರಳೋಲೆ**

ಅಕ್ಕನ ಹಳ್ಳಿಗೆ ಒಬ್ಬಳು

ತಂಗಿ ಹಳ್ಳಿಗೆ ಒಬ್ಬಳು

ಅತ್ತರೆ ಕರ್‍ಕೊಂಡ್ಹೋಗೋದಿಲ್ಲ

ಅಳದಿದ್ದರೆ ಕರ್‍ಕೊಂಡ್ಹೋಗ್ತಿನಿ–**ಮುತ್ತಿನೋಲೆ**[೧೦]

"ಬಗ್ಗಿದರೆ ಬಾಯಿಗೆ ಬರುತ್ತೆ

ಎದ್ದರೆ ಎದೆಗೆ ಹೊಡೆಯುತ್ತೆ–**ತಾಳಿ, ಕರಿಮಣಿಸರ**[೧೧]

ತಾಳಿ ಇದು ಮುತ್ತೈದೆಯ ಸಂಕೇತವಾಗಿದೆ, ಇದನ್ನು ಮದುವೆಯಾದ ಹೆಣ್ಣುಮಕ್ಕಳು ಹಾಕಿಕೊಳ್ಳುತ್ತಾರೆ. ಅರಿಶಿನ ಸವರಿದ ಗುಟ್ಟಿದಾರಕ್ಕೆ ಕರಿಮಣಿ, ಹವಳ ಚಿನ್ನದ ಗುಂಡುಗಳನ್ನು ತಾಳಿಗೆ ಪೋಣಿಸಿರುತ್ತಾರೆ. ಕೆಲವರು ಚಿನ್ನದ ಸರಕ್ಕೆ ಕರಿಮಣಿ ಸೇರಿಸಿ ಹಾಕಿಕೊಳ್ಳುವರು. ಕೆಲವರು ಅರಿಶಿನದ ಕೊನೆಯನ್ನೇ ಅರಿಶಿನ ದಾರದೊಂದಿಗೆ ಅದನ್ನು ಹಾಕಿಕೊಳ್ಳುವರು.

"ಆರುನೂರು ರೂಪಾಯಿನ ತ್ವಾಟ

ನೂರ ರೂಪಾಯಿನ ಬೀಗ

ಹಾಕೋಕೆ ಆಗ್ತದೆ

ತೆಗೆಯೋಕೆ ಆಗಲ್ಲ–**ತಾಳಿ**

ಒಂದ್ಹಣ ಕೊಟ್ಟು ನೋಡಿಸ್ತಿ

ಎರಡ್ಹಣ ಕೊಟ್ಟು ಮಾಡಿಸ್ತಿ

ಮೂರಣ ಕೊಟ್ಟು ತರಸ್ತಿ

ಕತ್ತಿನ ಮೇಲೆ ಗಂಡ

ಎದೆ ಮೇಗಲ ಮಿಂಡ–**ತಾಳಿ**

ಸುತ್ತಮುತ್ತ ಬೇಲಿಕಟ್ಟಿ

ಸುಂದ್ರಮ್ಮನ ಜೋಳ ತೋಳ್ದು

ಕೇಳೋರುಂಟು ತಿನ್ನೋರಿಲ್ಲ–**ಕರಿಮಣಿ**

ನಮ್ಮವ್ವನದು ಬಿದ್ದರೆ

ನಮ್ಮಪ್ಪನದು ಎದ್ದದೆ–**ತಾಳಿ, ಅತ್ಕಡಕು**

ಗಂಟ್ಲಲ್ಲಿ ಪಿಣಿ ಪಿಣಿ–**ತಾಳಿ**

ಚಿಕ್ಕಮನೆಗೆ ಚಿನ್ನದ ಬೀಗ–**ಮೂಗುತಿ**

ಮುಖದ ಮೇಲೆ ಮೂಗಿನದು ಕಿವಿಯಷ್ಟೇ ಪುಟ್ಟಸ್ಥಾನ. ಮೂಗಿಗೆ ಮೂರು ರೀತಿಯಲ್ಲಿ ಒಡವೆ ಹಾಕಿಕೊಳ್ಳುವುದನ್ನು ನೋಡುತ್ತೇವೆ.

ಹಿಂದೂಗಳಲ್ಲಿ ಮದುವೆಯಾಗದ ಹೆಣ್ಣು ಎಡಹೊಳ್ಳೆ ಮೇಲೆ ತೂತು ಮಾಡಿ ಚಿನ್ನದ ಮೂಗುತಿಯನ್ನು ಹಾಕಿಕೊಳ್ಳುತ್ತಾರೆ. ಬ್ರಾಹ್ಮಣ ಹೆಂಗಸರು ಮದುವೆಯಾದ ಮೇಲೆ ಬಲಹೊಳ್ಳೆಗೂ ತೂತು ಮಾಡಿ ಎರಡೂ ಮೂಗಿಗೂ ಮೂಗುತಿ ಹಾಕುತ್ತಾರೆ.[೧೨] ಹಾಗೆ ಮೂಗಿನ ಮಧ್ಯಕ್ಕೆ 'ಬುಲಾಕು' ಎಂಬ ಆಭರಣ ಹಾಕಿಕೊಳ್ಳುತ್ತಾರೆ. ಮಧ್ಯದಲ್ಲಿ ತೂತಿಗೆ ರಿಂಗು ಗೆಜ್ಜೆಯಿರುವ ಒಡವೆ ತುಟಿಯನು ತಾಗುವಂತೆ ಧರಿಸುತ್ತಿದ್ದರು.

"ಮೋಟ್ ಹುಣಸೇ ಮರದ್ಮೇಲೆ

ಮೋಟ್ ದೀಪ ಉರಿತದೆ–**ವಜ್ರದ ಮೂಗುತಿ**

ಬಾಲ ಮುಂದಾಗಿ ಬಲಕ್ಕೋಗ್ತದೆ–**ಮೂಗುತಿ**

ನಿಮ್ಮ ಸಮದೋರು ಬಂದು

ಕೈ ಹಿಡಕೊಂಡ್ರೆ ಏನಂತ ಬಿಡಿಸಿಕೊಂಡೀರಿ–**ಕೈ ಬಂದಿ, ಉಂಗುರ, ಕಡಗ, ಕೈ ಬಳೆ**

ಮುಂಗೈಲಿ ಫಳ ಫಳ–**ಬಂಗಾರದ ಬಳೆ**

ಬಾಯಗಲವಾಗಿ ಐದು ಬೆರಳನ್ನು ನುಂಗುವುದು–**ಬಳೆ**

ಡೊಂಕ ಮರಕ್ಕೆ ಸಂಕೋಲೆ ಹಾಕಿದೆ–**ಕೈ ಬಂದಿ**

ತಲೆ ಮೇಲೆ ಹರಳು, ಬಾಯಲ್ಲಿ ಬೆರಳು–**ಉಂಗುರ**

ಇಕ್ಕಿದರೆ ಎರಡು ಕಡೆಗೂ

ನೆಲ ಮುತ್ತಿಕ್ತವೆ–**ಕಾಲುಂಗುರಗಳು**

ನಡೆದ್ರೆ ಗಲಾಟೆ ಮಾಡುತ್ವೆ

ನಿಂತ್ರೆ ಸುಮ್ಮನಿರುತ್ವೆ–**ಕಾಲಿನ ಗೆಜ್ಜೆಚೈನು**

ಕಾಲಲ್ಲಿ ತಣ ತಣ–**ಗೆಜ್ಜೆ ಚೈನು, ಕಾಲುಂಗುರ**

ಸೊಂಟದಲ್ಲಿ ಜಣ ಜಣ–**ಗೆಜ್ಜೆಡಾಬು**

ಅಮರೇ ಗುಡ್ಡಕೆ ಹೋಗಿ

ಕುದುರೆ ಹಣ್ಣು ತಂದು

ಕೊಳ್ಳೋರುಂಟು ತಿನ್ನೋರಿಲ್ಲ–**ಹವಳ**[೧೩]

ಒಡಿಸಿದಂಥ ಭೂಪನಿಗೆ

ಎಂಟು ರೊಟ್ಟಿ

ಒಂದು ಸೋಲಿಗೆ ತುಪ್ಪ–**ಜಡೆ ಬಿಲ್ಲೆ**

ಕಾಲಲ್ಲಿ ತಣ ತಣ

ಸೊಂಟದಲ್ಲಿ ಜಣ ಜಣ

ಗಂಟ್ಲಲ್ಲಿ ಪಿಣಿ ಪಿಣಿ–**ಕಾಲುಂಗುರ, ಗೆಜ್ಜೆಪಟ್ಟಿ(ಡಾಬು) ಕುಪ್ಲೆ**

ತಲೆ ಮೇಲೆ ಹರಳು

ಬಾಯಲ್ಲಿ ಬೆರಳು–**ಉಂಗುರ**

ನಿಮ್ಮ ಸಮದೋರು ಬಂದು

ಕೈ ಹಿಡಿಕೊಂಡ್ರೆ ಏನಂತ ಬಿಡಿಸಿಕೊಳ್ತೀರಿ–**ಕಡಗ**

ಮುಂಗೈಲಿ ಪಳಪಳ–**ಬಳೆ**

ಬಾಯಿ ಅಗಲವಾಗಿ

ಮೂ ಬೆರಳು ನುಂಗುವುದು

ಬೀಯ ಮಾರುವವನ

ಹೆಗಲೇರಿ ಬರುವುದು

ಬಾ ಬಾ ಎಂದು ಕೂಗಿದರೆ

ಬಾಗಿಲಿಗೆ ಬರುವುದು

ರಾಯ ರಾಣಿಯರ ಹಸ್ತಕ್ಕೆ

ಇಕ್ಕೆ ಒಪ್ಪುವುದು–**ಬಳೆ, ಬಳೆಗಾರ ಶೆಟ್ಟಿ**

ಹತ್ತುವವರು ಇಬ್ಬರು

ಕೆಡವುವವರು ಹತ್ತು ಜನ

ತಿಂದವರು ಮೂವತ್ತೆರಡು ಜನ

ರುಚಿನೋಡಿದವ ಒಬ್ಬ–**ಕಾಲು, ಬೆರಳು, ಹಲ್ಲು, ನಾಲಗೆ**

ಹಾಲೆ ಮೇಲೆ ಉರಿಯೋದು–**ಓಲೆ**

ಅಟ್ರ ಅನ್ನಲ್ಲ, ಕುಟ್ಟಿದ್ರು ತೌಡಲ್ಲ ಒಡದ್ರು ಬೆಲಿ ಇಲ್ಲ–**ಮುತ್ತು**

ಚಿಕ್ಕ ಮನಿಗಿ ಚಿನ್ನದ ಬೀಗ–**ನತ್ತು**

ಬಾಲಾ ಮುಂದ ಮಾಡ್ಕೊಂಡು ಹುತ್ತ ಸೇರ್ತಾದ–**ಮೂಗಬಟ್ಟು**

ಆನಿಮ್ಯಾಲ ಅಂಬಾರಿ, ಬಳಕುತ ಬರಾವಯ್ಯಾರಿ–**ಝುಮಿಕಿ**

ಅಂತಪ್ಪನ ಮಗಳು ಅಂತಾ ಚೆಲುವಿ, ತೊಗಲ ತೋಟ್ಯಾಗ ತೂಗಾಡುವಾಕಿ–**ಬೆಂಡ್ವಾಲಿ**

ಅವ್ವಂದು ಹತ್ಯಾದ ಅಪ್ಪಂದು ಜೋತ್ಯಾಡ್ತಾದ–**ಬೆಂಡೋಲಿ, ಮೇಲಮುರುವು**

ಬಗ್ಗಿದ್ರ ಜೋತ ಬೀಳ್ತಾದ ಎದ್ದ ನಿಂತ್ರ ಎದಿಗಿ ಬಡೀತದ–**ಮಂಗಳ ಸೂತ್ರ**

ಮಾತಕತಿ ಯಾವಾಗ, ಕೈ ಕೈ ಹಿಡ್ದಾಗ

ಅಳಾದು ಕರ್‍ಯಾದು ಯಾವಾಗ ಅರ್ಧ ಒಳಗ ಸೇರಿದಾಗ

ನಗದು ಪಗೋದು ಯಾವಾಗ ಪೂರಾ ಒಳಗ ಹೋದಾಗ–**ಬಳೆ(ಬಳೆಗಾರ ಬಳೆ ತೊಡಿಸುವ ಸಂದರ್ಭ)**

ಊರ ಸುತ್ತ ಬೇಲಿ ಬೇಲಿಗೊಂದು ಕೀಲಿ–**ಡಾಬು(ಒಡ್ಯಾಣ)**

"ಹೊಟ್ಟೆ ಹಸ್ತಿರಲಿ ತುಂಬಿರಲಿ

ನೀನು ಮಾತ್ರ ನನ್ನಜೊತೇನೆ ಇರ್‍ಬೇಕು–**ಸೊಂಟದ ಪಟ್ಟಿ**

ಹೆಣ್ಣಿನ ಸೊಂಟ ಸಣ್ಣಗಿರಲಿ ಎಂದೋ, ಧರಿಸುವ ವಸ್ತುಗಳು ಬೀಳದಿರಲಿ ಎಂದೊ ಸೊಂಟದ ಆಭರಣಗಳಾದ ಸೊಂಟದ ಪಟ್ಟಿ ಮತ್ತು ಡಾಬನ್ನು ಧರಿಸುತ್ತಾರೆ. ಹೊಟ್ಟೆ ಹಸಿದಿರಲಿ ತುಂಬಿರಲಿ ಈ ಭೂಷಣವಂತೂ ಕಡ್ಡಾಯವಾಗಿ ಇರಲೇಬೇಕಾಗಿತ್ತು.

ಇಕ್ಕಿದರೆ ಎರಡು ಕಡೆಗೂ

ನೆಲ ಮುತ್ತಿಕ್ತವೆ–**ಕಾಲುಂಗುರ**"

ಕಾಲುಂಗುರ ಇದು ಮುತ್ತೈದೆಯ ಸೌಭಾಗ್ಯದ ಸಂಕೇತವಾಗಿದೆ. ಕಾಲಲ್ಲಿ ಯಾವ ಒಡವೆ ಧರಿಸಿದರೂ ಅದು ನೆಲವನ್ನು ತಾಕುತ್ತದೆ. ಹಿಂದೆ ಎರಡು ಕಾಲಿನ ಹತ್ತು ಬೆರಳುಗಳಿಗೂ ನಿರ್ದಿಷ್ಟ ಆಭರಣವನ್ನು ಹಾಕಿಕೊಳ್ಳುತ್ತಿದ್ದರು. ಆದರೆ ಈಗ ಸುತ್ತು ಕಾಲುಂಗುರವನ್ನು ಬಿಟ್ಟರೆ ಬೇರ್‍ಯಾವ ಕಾಲುಂಗುರಗಳನ್ನು ಇಂದಿನವರು ಧರಿಸಲು ಇಚ್ಛಿಸುವುದಿಲ್ಲ. ಕೆಲವರ ಮನೆತನಕ್ಕೆ ಕಾಲುಂಗರ ಸರಿ ಬರುವುದಿಲ್ಲ. ಚಿನ್ನದಂತೆ ಬೆಳ್ಳಿಯೂ ಲಕ್ಷ್ಮಿಯಾದುದರಿಂದ ಅದನ್ನು ಕಾಲಿನಲ್ಲಿ ಹಾಕಿಕೊಂಡರೆ ಅಪಚಾರ ಮಾಡಿದಂತಾಗುವುದು ಎಂದು ನಂಬಿದ್ದರು.

"ಅಡ್ಡಗೋಡೆಯ ಮೇಲೆ ದೀಪ ಉರೀತಿದೆ–**ಮೂಗುತಿ**

ಆತನೆ ಈತನೆ ಸೀತಂಗಿ ರಾಯನೆ

ಸೀತೆಯ ಕೊಳ್ಳಲಿರುವೊ ಪದಕ ಎಣಿಸುವವನಿಗೆ

ಆರು ಬಳ್ಳ ಎಣ್ಣೆ ಅರವತ್ತು ಕಜ್ಜಾಯ–**ಕರಿಮಣಿ**"

"ಆನೆ ಮೇಲೆ ಅಂಬಾರಿ ಝುನಝುನಕ ಹೆಣ್ಣಿನಂಗೆ

ಬಳಕುತ್ತಾ ಇರುವ ವೈಯಾರಿ–**ಜುಮಕಿ**

ಇಲ್ಲಿ ಮುಡಿದ ಹೂವು

ಕೊಲ್ಲೂರಿಗೆ ಹೋದರೂ ಬಾಡುವುದಿಲ್ಲ–**ಜಡೆಬಿಲ್ಲೆ**[೧೬]

“ಉದ್ದನೆ ಮರಕ್ಕೆ ಕೊಡ್ಲಿ ಸಿಗಾಕೇತಿ–**ಮೂಗುತಿ**

ಒಳ್ಳೆ ಹುಡುಗ ಬೆಳ್ಳಿದಾರ ಹಾಕ್ತಾನೆ, ತೆಗೆಯಲಾರ–**ತಾಳಿ**[೧೭]

“ಗೆರೇಲಿ ಗೊರವ ಮೊಟ್ಟೆ ಇಕ್ಕೇತೆ–**ನತ್ತು**

ಚಿಕ್ಕ ಗೋಡೆಯ ಮೇಲೆ ಚಿನ್ನದ ದೀಪ–**ಮೂಗುತಿ**[೧೮]

“ಚೆಂಬು ಚೆಣಿಕೆ ಒಂಬತ್ತು ಕುಣಿಕೆ

ನೆಯ್ಯಾಕುಳ್ಳುಡುಗಿ ಕೈ ಕೆಳಗೆ–**ಮಾಂಗಲ್ಯ**[೧೯]

“ತುಂಡು ಗೋಡೆಯ ಮೇಲೆ ತುಂಬುಚಂದ್ರ ಕೂತಿದ್ದಾನೆ–**ಮೂಗುತಿ**[೨೦]

“ಧರೆ ಮೇಲೆ ತುರ್ಕ ಕೂತದೆ–**ಮೂಗು, ಮೂಗುತಿ**

ನಿನಗೆ ಗಟ್ಟಿ ನಿನ್ನ ಹೆಂಡತಿಗೆ ಪೊಳ್ಳು–**ಮುರಿ–ಕಡಗ**[೨೧]

“ಪುಟ್ಟ ಗಂಡಗೆ ಪುಟ್ಟ ಹೆಂಡತಿ–**ಮೂಗು–ಮೂಗುತಿ**

ಯಾಳ್ದೆ ಮನೆಗೆ ಒಂದೇ ಕಂಬ–**ಮೂಗು**[೨೨]

“ಸಾವಿರ ರೂಪಯಿನ ಎತ್ತು ಒಂದೇ ಹಗ್ಗ–**ಕಾಸಿನ ಸರ**[೨೩]

“ಸುತ್ತ ಸುತ್ತ ಕರೀ ಗೋಡೆ ಅದಕ್ಕೆರಡು ಬಾಗಿಲು

ಹಾಕಿಕೊಳ್ಳುವವರುಂಟು ತೆಗೆಯುವವರೇ ಇಲ್ಲ–**ಕರಿಮಣಿ**

ಹಸಿ ಮರಕ್ಕೆ ದಸಿ ಹೊಡೆದಿದೆ–**ಮೂಗುತಿ**[೨೪]

“ಅಗಲನ ಬಾಯೋಳ್

ಹೆಗಲೇರಿ ಬರುವೋಳೆ

ಎಡರುಬಿಡುರು ನುಂಗೋಳೆ–**ಬಳೆ**

ಇಕ್ಸಕಮ್ಮದು

ಕಕ್ಸಿ ಬೀಳೋದು–**ಬಳೆ**

ಉದ್ದಾನ್ನ ಮರಕ್ಕೆ ಗುದ್ದಲಿ ಸಿಗಾಕೈತೆ–**ಮೂಗುತಿ**

ಒಂದು ಅತ್ತಿಗೊಂಡಿದೆ

ಒಂದು ಅಗಲಾಡ್ತಾದೆ–**ಬೆಂಡೋಲೆ**

ಒಂದು ಗಂಗ್ಳದಾಗೆ

ಏಳು ಮಲ್ಲಿಗೆ ಹೋಮ–**ಬೆಂಡೋಲಿ**

ಕಂಬದ ಮೇಲೆ

ನಿಂಬೆ ಹುಳಿ–**ಕಡಗ**

ಕರೆ ಕುದ್ರೆ

ಇರಾಣಿ ಚಣಕ

ಒಬ್ಬಣ್ಣ ಹತ್ತಾನೆ

ಒಬ್ಬಣ್ಣ ಇಳಿತಾನೆ–**ಮೂಗುಬಟ್ಟು**[೨೫]

"ಆತನೆ ಈತನೆ ಸೀತಂಗಿ ರಾಯನೆ

ರಾಮನ ಕೊರಳಲ್ಲಿರುವ ದೊಡ್ಡ ಗುಂಡು ಮಾಮಲೆ ಸರ

ಅದರ ಹೆಸರು ಹೇಳಿದವನಿಗೆ ಹಳ್ಳಿ ಹರಕೆ ಗುಳ್ಳಿ ಗುರಕೆ

ಸಾಲಿಗ್ರಾಮದ ಸಾವುಕಾರಿಕೆ–**ಕರಿಮಣಿ**[೨೬]

"ಆನೆ ಮೇಲೆ ಅಂಬಾರಿ ಝುನಝುನಕ ಹೆಣ್ಣಿನಂಗೆ ಬಳುಕುವ ವೈಯಾರಿ–**ಜುಮಕಿ**[೨೭]

### ೪.೫. ಒಡಪುಗಳು

೧. "ಮುತ್ತೈದಿಯರ ಮೂಗಿನಲ್ಲಿರುವದು ನತ್ತು

....ರ ಹೆಸರು ಹೇಳುವೆನು ಮೂರು ಸಂಜೆ ಹೊತ್ತು

೨. ಆನಿಮ್ಯಾಲ ಅಂಬಾರಿ

ಒಂಟಿಮ್ಯಾಲ ನಗಾರಿ

ಕಂಠಿಸರಾ ಹಾಕ್ಕೊಂಡು ಕರಿಲಾಕ ಬರತಾರ.....

೩. ಲೋಡಿನ ಮ್ಯಾಲ ಲೋಡ

ಕೈಯಾಗ ಪಾಟ್ಲ ಜೋಡ

ಕಿವ್ಯಾಗ ವಾಲೀ ಪಾಡ

ಕರಿಲಾಕ ಬಂದಾರ ನೋಡ....

೪. ಕುರುಂ ಕುರುಂ ಸವತಿ ಮಿಡಿ

ಕುದರೀಗಿ ಹಾಕ್ಯಾನ ತುತನೀಧಡಿ

ಕೈಯಾಗ ಹಾಕ್ಯಾರ ಬಂಗಾರ ಖಡಿ

ಅಗಸ್ಯಾಗ ಬರತಾನ ಖೂನಾ ಹಿಡಿ....

೫. ಥ್ಯಾಲ್ಯಾಗ ಥಾಲಿ, ಹೂವಿನ ಮಾಲಿ

ಹಾಲಿನಾಂಗ ಹೇಳಿ ವಾಲಿ ತರಲಾಕ ಹೋಗತಾರ...

೬. ಗಚ್ಚಿನಕಟ್ಟೆ ಮುತ್ತಿನ ಬಜಾರ

ಬಜಾರದೊಳಗ ಹೋಗಿ

ಬಾಜುಬಂದಿ ಕೊಳ್ಳತಾರ...

೭. ಬಂಗಾರ ಗಿಡ ಬೆಳ್ಳಿ ಬುಡ

ಚಂದ್ರಹಾರ ಮಾಡಸರೀ ಅಂದರ

ಮುಂದಿನ ಪಗಾರ ಬರ್ಲಿ ಅಂತಾರ...

೮. ಬಂಗಾರ ಬ್ಯಾಡ ಅಂತಾರ

ಸಿಂಗಾರ ಮಾಡ ಅಂತಾರ

ಅಂಗಾಲ ಸಪ್ಪಳಿಲ್ಲದೆ ಅಂಗಳದಾಗ ಬರುತಾರ...

೯. ಒಂಬತ್ತು ಬೆರಳಿಗೆ ಒಂಬತ್ತುಂಗರ

ಹತ್ತನೇ ಬೆರಳಿಗಿ ಮುತ್ತುಂಗುರ

ಹತ್ತು ಮಂದ್ಯಾಗ ಹೌದನಿಸಿಕೊಳ್ಳತಾರ..

೧೦. ವಾಲಿ ತರತೀನಂದ ಹಾಂಗೇ ಬಂದ್ರು

ಸರಗೀ ತರಲೇನಂದು ಸುಮ್ಮನೇ ಬಂದ್ರು

ಬುಗಡೀ ತರಲೇನಂದು ಬಿಟ್ಟು ಬಂದ್ರ

ಕರೇ ಕುದರಿ ಹತಗೊಂಡ ಕರಿಲಾಕೇ ಬಂದ್ರು....

೧೧. ಚಿಕ್ಕ ಚಿಕ್ಕ ನಿರಗಿ

ಚಾರ ಕಣ್ಣಿನ ಕುಬುಸ

ವಜ್ರ ವಾಲ

ಗೆಜ್ಜೆ ಟಕ್ಕೆ

ಮುರಾಳ ವಂಕಿ

ಮುರಗಿ ಸರಗಿ

ಹತ್ತ ಮಂದ್ಯಾಗ ಕುಂತು ನತ್ತ ಮಾಡಸ್ತಾರ.....[೨೮]

**ಕೊನೆ ಟಿಪ್ಪಣಿಗಳು**

೧. ಸೌಭಾಗ್ಯವತಿ ಕೆ. (ಸಂ), ಜನಪದ ಅಭರಣಗಳು, ಪುಟ, ೧೪೩.

೨. ಅದೇ, ಪುಟ, ೧೪೬.

೩. ಅದೇ, ಪುಟ, ೧೪೮.

೪. ಅದೇ, ಪುಟ, ೧೫೦.

೫. ಅದೇ, ಪುಟ, ೧೪೯.

೬. ಅದೇ, ಪುಟ, ೧೫೨.

೭. ಅದೇ, ಪುಟ, ೧೫೩-೧೬೦.

೮. ಸಿಪಿಕೆ(ಸಂ), ಕನ್ನಡ ಒಗಟುಗಳ ಸಮೀಕ್ಷೆ, ಪುಟ, ೪.

೯. ಸೌಭಾಗ್ಯವತಿ ಕೆ. (ಸಂ), ಜನಪದ ಅಭರಣಗಳು, ಪುಟ, ೧೬೩.

೧೦. ಅದೇ, ಪುಟ, ೧೬೪.

೧೧. ಅದೇ, ಪುಟ, ೧೬೫.

೧೨. ಅದೇ, ಪುಟ, ೧೬೬.

೧೩. ಅದೇ, ಪುಟ, ೧೬೭–೧೬೯.

೧೪. ಅದೇ, ಪುಟ, ೧೬೮.

೧೫. ಲಕ್ಕಪ್ಪಗೌಡ.ಹೆಚ್.ಜೆ(ಸಂ), ಒಗಟುಗಳು, ಪುಟ, ೪.

೧೬. ಸಿಪಿಕೆ(ಸಂ), ಕನ್ನಡ ಒಗಟುಗಳ ಸಮೀಕ್ಷೆ, ಪುಟ, ೧೪.

೧೭. ಲಕ್ಕಪ್ಪಗೌಡ.ಹೆಚ್.ಜೆ(ಸಂ), ಒಗಟುಗಳು, ಪುಟ, ೧೮.

೧೮. ಸಿಪಿಕೆ(ಸಂ), ಕನ್ನಡ ಒಗಟುಗಳ ಸಮೀಕ್ಷೆ, ಪುಟ, ೧೬.

೧೯. ಲಕ್ಕಪ್ಪಗೌಡ.ಹೆಚ್.ಜೆ(ಸಂ), ಒಗಟುಗಳು, ಪುಟ, ೧೮.

೨೦. ಅದೇ, ಪುಟ, ೨೪.

೨೧. ಸಿಪಿಕೆ(ಸಂ), ಕನ್ನಡ ಒಗಟುಗಳ ಸಮೀಕ್ಷೆ, ಪುಟ, ೧೬.

೨೨. ಅದೇ, ಪುಟ, ೪೪.

೨೩. ಲಕ್ಕಪ್ಪಗೌಡ.ಹೆಚ್.ಜೆ(ಸಂ), ಒಗಟುಗಳು, ಪುಟ, ೪೨.

೨೪. ಅದೇ, ಪುಟ, ೫೧.

೨೫. ಅದೇ, ಪುಟ, ೪೯–೭೫.

೨೬. ಸಿಪಿಕೆ(ಸಂ), ಕನ್ನಡ ಒಗಟುಗಳ ಸಮೀಕ್ಷೆ, ಪುಟ, ೧೪.

೨೭. ಲಕ್ಕಪ್ಪಗೌಡ.ಹೆಚ್.ಜೆ(ಸಂ), ಒಗಟುಗಳು, ಪುಟ, ೪೬.

೨೮. ವಾಲಿ.ಎಂ.ಎನ್, ಸಿರಿಗನ್ನಡ ಒಡಪುಗಳು, ಪುಟ, ೧೪–೧೭.

❖❖❖

# ಅಧ್ಯಾಯ : ಐದು

೫.೧. ಆಭರಣಗಳ ಕುರಿತ ನಂಬಿಕೆ, ಆಚರಣೆ ಮತ್ತು ನಿಷೇಧಗಳು

೫.೨. ಆಭರಣಗಳ ಬಳಕೆಯ ಸ್ಥಿತ್ಯಂತರಗಳು

## ಅಧ್ಯಾಯ ಐದು

### ೫.೧ ಆಭರಣಗಳ ಕುರಿತ ನಂಬಿಕೆ, ಆಚರಣೆ ಮತ್ತು ನಿಷೇಧಗಳು

ಕಿವಿ, ಮೂಗು ಚುಚ್ಚುವುದರ ಮೂಲಕ ರೋಗನಿರೋಧಕ ಶಕ್ತಿ ಹೆಚ್ಚುತ್ತದೆಂದು ಹೇಳುಬಹುದು. ಹಾಗೆಯೇ ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ, ಕಬ್ಬಿಣ ಇವುಗಳನ್ನು ಹಾಕಿಕೊಳ್ಳುವುದರಿಂದ ರೋಗಗಳನ್ನು ಗುಣಪಡಿಸಬಹುದು. ಮತ್ತು ದೃಷ್ಟಿ ದೋಷ ನಿವಾರಿಸುವ ಶಕ್ತಿ ಇರುವುದನ್ನು ಗುರುತಿಸಬಹುದಾಗಿದೆ. ಹಾಗೆಯೇ ಕರಿಉಣ್ಣೆ ಕಂಕಣ, ಕರಿದಾರ, ಕರಿಮಣಿಗಳು ಕವಡೆ, ಗಜ್ಜುಗ ಮುಂತಾದವುಗಳನ್ನು ಹಾಕಿಕೊಳ್ಳುವುದರಿಂದ ಮಕ್ಕಳಿಗೆ ಭೂತ, ಪಿಶಾಚಿ ಭಾದೆ ತಟ್ಟುವುದಿಲ್ಲ ಎಂಬ ನಂಬಿಕೆ ಸಮುದಾಯಗಳಲ್ಲಿ ಆಳವಾಗಿ ಬೇರೂರಿದೆ. ಹಾಗೆ ನಾಗರ ಆಭರಣ ಮಾಡಿಸಿ ಹಾಕಿಕೊಂಡರೆ ಮಕ್ಕಳಾಗುತ್ತವೆ ಎಂಬ ನಂಬಿಕೆಯು ಸಹ ಇರುವುದನ್ನು ನೋಡಬಹುದಾಗಿದೆ.

ಪುರುಷರು ಕಿವಿಗೆ ಒಂಟಿ ಸೊಂಟಕ್ಕೆ ಉಡುದಾರ ಹಾಕಿಕೊಳ್ಳುವುದು ಒಂದು ಕಾಲದಲ್ಲಿ ಕಡ್ಡಾಯವಾಗಿತ್ತು. ತಂದೆ ತಾಯಿ ಸತ್ತರೆ ಮಾತ್ರ ಒಂಟಿ ತೆಗೆಯಬೇಕಿತ್ತು.

"ಸಮಾಜದಲ್ಲಿ ಆಭರಣಗಳನ್ನು ದೇಹಾಲಂಕಾರಕ್ಕಾಗಿ ಹೆಚ್ಚಾಗಿ ಉಪಯೋಗಿಸಿದರೂ ಸಹ ಪ್ರಾಚೀನ ಕಾಲದಿಂದ ಅನೇಕ ಜನರು ಧರಿಸುತ್ತಿರುವ ತಾಯಿತ, ಅಂತ್ರ, ರಕ್ಷಾಮಣಿಗಳನ್ನು ಮೊದ ಮೊದಲು ರೋಗ ನಿವಾರಕ್ಕಾಗಿ ಮತ್ತು ರಕ್ಷಣಾ ಸಾಧನಗಳೆಂದು ಮಾತ್ರ ಉಪಯೋಗಿಸಿದರೂ ದೇಹ ಶೃಂಗಾರ ಸಾಧನಗಳೆಂದು ಮಾತ್ರ ಉಪಯೋಗಿಸಿದರೂ ದೇಹ ಶೃಂಗಾರವನ್ನು ಮಾಡಿಕೊಳ್ಳಲು ಸಹ ಅವುಗಳನ್ನು ಧರಿಸುವದು ಕಂಡುಬರುತ್ತದೆ."[೧] ಹುಟ್ಟಿದ ಪ್ರತಿಯೊಂದು ಕೂಸಿಗೂ ನಂಬಿಕೆಯುಳ್ಳ ಸಂಪ್ರದಾಯಸ್ಥರಾದ ಹಿಂದೂ ಜನರು ಕೈಗೆ ತೆಳು ಕಬ್ಬಿಣದ ಬಳೆ ಇಲ್ಲವೆ ಕರಿದಾರ ಹಾಕುತ್ತಾರೆ. ಹಣೆ, ಕಣ್ಣುಗಳಿಗೆ ಕಾಡಿಗೆ ಹಚ್ಚುವುದರಿಂದ ಭೂತ ಪಿಶಾಚಿಗಳ ಕೆಟ್ಟ ಪರಿಣಾಮ ಮತ್ತು ಮಾಟಗಾರ್ತಿಯರ ಕೆಟ್ಟ ದೃಷ್ಟಿದೋಷ ಉಂಟಾಗುವುದಿಲ್ಲವೆಂಬ ಭಾವನೆ ಇದೆ.

ಹಾಗೆಯೇ ಕೂಸಿನ ಕಿವಿಗೆ ಮುರುವು ಚುಚ್ಚುವುದು ಸಹ ಬರಿ ಆಭರಣವಾಗಿರದೇ ಕೂಸಿಗೆ ಮುಟ್ಟುದೋಷ, ಬಾಲಗ್ರಹವಾಗುವುದಿಲ್ಲ ವೆಂಬ ನಂಬುಗಿಯೂ ಇದೆ.

ಶನಿ, ಮಂಗಳ ಮುಂತಾದ ಗ್ರಹಗಳ ದೋಷ ಅವುಗಳ ಕೆಟ್ಟ ಪರಿಣಾಮಗಳನ್ನು ನಿವಾರಿಸಲು ಉಂಗುರ, ಬಳೆ, ತಾಯಿತ ಹಾಗೆಯೇ ಬೆಲೆಯುಳ್ಳ ಹರಳುಗಳಂತಹ ಆಭರಣಗಳನ್ನು ಹಾಕಿಕೊಳ್ಳಲು ಕೆಲವು ಜ್ಯೋತಿಷಿಗಳು ಹೇಳುತ್ತಾರೆ. ಹಾಗೆಯೇ ಕೆಲವು ರೋಗಗಳನ್ನು ನಿವಾರಿಸಲು ತಾಮ್ರದಿಂದ ತಯಾರಿಸಿದ ಆಭರಣಗಳನ್ನು ಹಾಕಿಕೊಳ್ಳುತ್ತಾರೆ. ಮಕ್ಕಳ ಕೊರಳು, ಸೊಂಟಗಳಿಗೆ ತಾಮ್ರದ ಅಥವಾ ನಿಕೆಲ್ ನಾಣ್ಯಗಳ ಸರಗಳನ್ನು ಮಾಡಿ ಹಾಕಿಕೊಳ್ಳುತ್ತಾರೆ.

ಬಂಗಾರದ ಆಭರಣಗಳನ್ನು ಮಧ್ಯಮ ವರ್ಗದವರು ರತ್ನ, ವಜ್ರ, ಮಾಣಿಕ್ಯ ಬಹು ಬೆಲೆಯುಳ್ಳ ಆಭರಣಗಳನ್ನು ಆಗರ್ಭ ಶ್ರೀಮಂತರು, ಮಹಾರಾಜ, ಮಹಾರಾಣಿಯರು ಹಾಕಿಕೊಳ್ಳುತ್ತಾರೆ ಇನ್ನುಳಿದ ಶ್ರೀಮಂತರು, ಉಚ್ಚವರ್ಗದವರು ಬಂಗಾರ ಮತ್ತು ವಜ್ರದ ಆಭರಣಗಳನ್ನು ಧರಿಸುತ್ತಾರೆ. ಹೀಗೆ ಆಭರಣಗಳನ್ನು ಹಾಕಿಕೊಂಡರೂ ಕಾಲಿಗೆ ಮಾತ್ರ ಬೆಳ್ಳಿಯಿಂದ ಮಾಡಿದವುಗಳನ್ನೇ ಹಾಕಿಕೊಳ್ಳುತ್ತಾರೆ. ಏಕೆಂದರೆ ಬಂಗಾರವು ಲಕ್ಷ್ಮೀದೇವಿ ಇದ್ದಂತೆ ಕಾರಣ ಬಂಗಾರದಿಂದ ಮಾಡಿದ ಆಭರಣಗಳನ್ನು ಸೊಂಟದ ಕೆಳಗೆ ಹಾಕಿಕೊಂಡರೆ ಲಕ್ಷ್ಮೀದೇವಿಗೆ ಅಪಮಾನ ಮಾಡಿದಂತೆ ಎಂಬ ನಂಬಿಕೆ ಇದೆ. ಹೀಗೆ ಮಾಡುವುದರಿಂದ ಬಡತನ, ವಿಪತ್ತು, ದುರದೃಷ್ಟಿ, ಕೆಟ್ಟದಾಗುತ್ತದೆ ಎಂಬ ಕಲ್ಪನೆ ಇದೆ. ಅದಕ್ಕಾಗಿ ಕಾಲಿಗೆ ಬಂಗಾರದ ಆಭರಣಗಳು ತಾಗಿದರೆ ಅವುಗಳನ್ನು ಹಣೆಗೆ ಮುಟ್ಟಿಸಿ ನಮಸ್ಕರಿಸುತ್ತಾರೆ.

ಲೋಹಗಳ ಬಗ್ಗೆ ಮನುಷ್ಯನಿಗೆ ತುಂಬಾ ವಿಸ್ತಾರವಾದಂತಹ ನಂಬಿಕೆಗಳಿವೆ. "ಅದರಲ್ಲಿ ಕಬ್ಬಿಣ, ಕಂಚು, ಬೆಳ್ಳಿ, ಬಂಗಾರ ಹೀಗೆ ಅನೇಕ ವಿಧಗಳಿವೆ. ಅದರಲ್ಲೂ ಬಂಗಾರ, ಚಿನ್ನ, ಬೆಳ್ಳಿಗಳಿಗೆ ತುಂಬಾ ಮೌಲ್ಯವಿದೆ."[೨]

ಮನುಷ್ಯನ ಬದುಕು ಯಾವಾಗಲೂ ಚಿನ್ನದಷ್ಟು ಬೆಲೆಯುಳ್ಳದ್ದಾಗಿಲ್ಲ ಎಂದು ಅವನ ಬಳಿ ಚಿನ್ನ ಯಾವಾಗಲೂ ಇರಬೇಕೆಂಬ ನಂಬಿಕೆ ಇದೆ.

ಹಾಗೆಯೇ ಕೆಲವು ನಿಷೇಧಗಳನ್ನು ನೋಡಬಹುದು. ಅರಸರ ಹೊರತು ಬೇರೆಯವರು ಕಾಲಿಗೆ ಚಿನ್ನದ ಕಾಲುಂಗರವನ್ನು ಧರಿಸಬಾರದು. ರಾಜ ಮನೆತನಗಳಲ್ಲಿ ಕಾಲುಂಗರ ಚಿನ್ನದ್ದೇ ಆಗಿರಬೇಕು. ಏಕೆಂದರೆ ಅರಸಗಿತ್ತಿಯರು ಚಿನ್ನವನ್ನು ಹಾಕಿಕೊಂಡು ನಡೆದರೆ ರಾಜ್ಯಲಕ್ಷ್ಮೀ, ಕೋಶಲಕ್ಷ್ಮೀ ತಮ್ಮಲೇ ಉಳಿದುಕೊಳ್ಳುತ್ತಾಳೆಂಬ ನಂಬಿಕೆ ಇದೆ.

"ಅಕ್ಕಸಾಲಿಗ ಒಡವೆ ಮಾಡುವಾಗ ಮುಂದೆ ಕುಳಿತು ನೋಡುತ್ತಲೇ ಇದ್ದರೆ ಅದಕ್ಕೆ ದೃಷ್ಟಿ ತಾಗಿ ಚಿನ್ನ ಬಿರುಕು ಬಿಡುತ್ತದೆ."[೩]

ಆಭರಣಗಳನ್ನು ಹಾಕಿಕೊಂಡಾಗ ಅವು ಕಪ್ಪಾದರೆ ಹಾಕಿಕೊಂಡವರು ಕೆಟ್ಟ ನಡತೆಯವರಾಗಿರುತ್ತಾರೆಂಬ ನಂಬಿಕೆ ಇದೆ.

ಉಡುದಾರ ಹಾಕುವುದರಿಂದ ವಾತಪಿತ್ತಗಳಿಂದ ಕಾಯಿಲೆಗಳನ್ನು ಗುಣಪಡಿಸುತ್ತದೆ.

"ಉಡುದಾರ ಹಾಕಿಕೊಳ್ಳದ ಹುಡುಗರ ಬೆನ್ನ ಮೇಲೆ ಹೊಡೆದರೆ ಅವರು ನಪುಂಸಕರಾಗುತ್ತಾರೆ."[೪]

ಚಿಕ್ಕ ಮಕ್ಕಳಿಗೆ ಕಚ್ಚೆ ತಾಳಿ ಕಟ್ಟಿದರೆ ರಗಳೆ, ಅಳುವುದನ್ನು ನಿಲ್ಲಿಸುತ್ತಾರೆ.

ಕರ್ಣಾಭರಣಗಳು ಕೀರ್ತಿಯನ್ನು, ವಿಶೇಷ ಕಾಂತಿಯನ್ನು ಉಂಟುಮಾಡುತ್ತವೆ. ವಾತ, ಪಿತ್ತ, ದೋಷಗಳನ್ನು ಇವು ನಾಶಮಾಡುತ್ತವೆ.

"ಕಂಠಾಭರಣಗಳಾದ ಚಿನ್ನದ ಅಥವಾ ಮುತ್ತಿನ ಸರಗಳನ್ನು ಹಾಕಿಕೊಂಡರೆ ಅವುಗಳಿಂದ ಶರೀರಕ್ಕೆ ಹೊಸಕಾಂತಿಯನ್ನುಂಟುಮಾಡುತ್ತದೆ. ಹಾಗೆಯೇ ವ್ಯಕ್ತಿಗಳಿಗಿರುವ ದೋಷ ಪರಿಹರಿಸಿ ಆಯುರಾರೋಗ್ಯವನ್ನು ಉಂಟುಮಾಡುತ್ತದೆ."[೫]

"ಹಾಗೆಯೇ ಕಡಗವನ್ನು ಕೈಗಳಿಗೆ ಹಾಕಿಕೊಳ್ಳುವುದರಿಂದ ಭೋಗ-ಭಾಗ್ಯ, ಸುಖವನ್ನು ಹಾಗೆ ಐಶ್ವರ್ಯವನ್ನು ಕೊಟ್ಟು ಕಾಪಾಡುತ್ತಾನೆ."[೬]

"ಕಣ್ಣಿನ ರೆಪ್ಪೆಗಳು ಬಡಿದುಕೊಂಡರೆ ಕೆಡಕಾಗುತ್ತದೆ ಎನ್ನುತ್ತಾರೆ. ಅದನ್ನು ತಾಳಿಯಿಂದ ಅಥವಾ ಉಂಗುರದಿಂದ ಕಣ್ಣಿಗೆ ಮುಟ್ಟಿಸಿಕೊಳ್ಳುತ್ತಾರೆ. ಇದರಿಂದ ಕೆಡಕು ನಿವಾರಣೆಗೊಳ್ಳಬಹುದು ಎಂದು ನಂಬಲಾಗಿದೆ."[೭]

ಕಡುಬಣ್ಣದ ಹವಳ ದುಷ್ಟಶಕ್ತಿಗೆ ಇಷ್ಟವಾದದರಿಂದ ಅದನ್ನು ಹಾಕಿಕೊಳ್ಳುತ್ತಾರೆ.

"ಓಲೆ ಮುತ್ತೈದೆ ಸಂಕೇತ, ಆಸ್ತಿ, ಶುಭಕಾರಿ.

ಚಿಕ್ಕಮಕ್ಕಳಿಗೆ ಕಿವಿಚುಚ್ಚುವಾಗ ಕೊಬ್ಬರಿ ಮುರಿಯಬೇಕು.

ಕಾಲಿಗೆ ಹಾಕಿಕೊಳ್ಳುವ ತೋಡ, ಮುಂಗೈ ಅಥವಾ ಅಂಗೈಗೆ ಹಾಕಿಕೊಳ್ಳುವ ಕಡಗ ಹಾಕುವುದರಿಂದ ಸೊಂಟದ ಭಾಗಗಳಿಗೆ ಬಲ ನೀಡುತ್ತದೆ ಹಾಗೆಯೇ ಜನನೇಂದ್ರಿಯಗಳ ಆರೋಗ್ಯವನ್ನು ಕಾಪಾಡುತ್ತವೆ."[೮]

ಹೆಂಗಸರು ನವರತ್ನಗಳನ್ನು ಕನಸಿನಲ್ಲಿ ಕಂಡರೆ ಸಂತಾನಲಾಭವಾಗುತ್ತದೆ.

"ಚಿನ್ನದ ನೀರು ಮೈಮೇಲೆ ಬಿದ್ದರೆ ಸಾಮಾನ್ಯವಾಗಿ ಯಾವುದೇ ರೋಗ ಬರುವುದಿಲ್ಲ.

ಸತ್ತಾಗ ಆಭರಣವನ್ನು ಬಾಯಿಗೆ ಹಾಕುತ್ತಾರೆ.

ತಾಳಿ ಸಿಕ್ಕರೆ ತುಂಬಾ ಅದೃಷ್ಟ.

ಪಚ್ಚೆ ಆಭರಣಧರಿಸಿದರೆ ಶ್ರೀಮಂತನಾಗುತ್ತಾನೆ.

ತಾಳಿ ತರುವಾಗ ತಾಳಿಯ ಜೊತೆಗೆ ಕರಿಮಣಿ, ಅರಿಶಿಣ, ಕುಂಕುಮವನ್ನು ಸೇರಿಸಿ ಕೊಟ್ಟರೆ ಕೊಟ್ಟವರಿಗೆ ಒಳ್ಳೆಯದಾಗುತ್ತದೆ."[೯]

ಮುತ್ತೈದೆ ಕಾಲುಂಗುರ ಹಾಕದೇ ಹೊರಗೆ ಹೋಗಬಾರದು ಅಥವಾ ಹೊಸ್ತಿಲು ದಾಟಬಾರದು.

ಸತ್ತ ಹೆಣ್ಣಿನ ಮಂಗಳಸೂತ್ರವನ್ನು ಅಂತ್ಯ ಸಂಸ್ಕಾರ ಮಾಡಿದವರು ಉಂಗುರ ಮಾಡಿ ಹಾಕಿಕೊಂಡರೆ ದೀರ್ಘಾಯುಷಿಗಳಾಗುವರು.

"ಸೊಂಟಕ್ಕೆ ಉಡುದಾರ ಹಾಕದಿದ್ದರೆ ಹೊಟ್ಟೆಯಲ್ಲಿ ಹುಳು ಹೆಚ್ಚಾಗುತ್ತವೆ.

ಶುಕ್ರವಾರ-ಮಂಗಳವಾರ ಮೈ ಮೇಲಿನ ಆಭರಣಗಳನ್ನು ತೆಗೆಯಬಾರದು.

ತಾಮ್ರದ ಬಳೆ ನರವ್ಯಾಧಿಗೆ ಒಳ್ಳೆಯದು.

ಹವಳದ ನೀರು ಮೈ ಮೇಲೆ ಬಿದ್ದರೆ ಒಳ್ಳೆಯದು."[೧೦]

"ತಾಮ್ರದ ನೀರು ಮೈಮೇಲೆ ಹಾಕಿಕೊಂಡರೆ ಚರ್ಮರೋಗಗಳು ಹತ್ತಿರ ಬರುವುದಿಲ್ಲ. ತಲೆಗೆ ಹಾಕಿಕೊಳ್ಳುವ ಪದಕಗಳು ತಲೆಯಲ್ಲಿನ ನರಗಳು ತಂಪಾಗಿರುವಂತೆ ಮಾಡುತ್ತವೆ. ಕಿವಿಯ ಓಲೆ ಹಾಕಿಕೊಳ್ಳುವುದರಿಂದ ಬುದ್ಧಿವಂತರಾಗುವರು. ಹಾಗೆಯೇ ಕೊರಳಸರ ಹೃದಯರೋಗ ಬರದಂತೆ ಕಾಪಾಡುತ್ತದೆ. ಮುಂಗೈಗೆ ಹಾಕುವ ಬಳೆ, ಕಡಗ, ಡಾಬು, ಸೊಂಟದ ಪಟ್ಟಿಗಳು ಕಾಲಿಗೆ ಹಾಕುವ ಕಾಲುಗೆಜ್ಜೆ, ಕಾಲುಂಗುರಗಳು ಹಾಕುವುದರಿಂದ ಶರೀರದ ಭಾಗಗಳಿಗೆ ಬಲ ನೀಡುತ್ತವೆ."[೧೧] ಹಾಗೆ ಯಾವುದೇ ರೋಗ ಬರುವುದಿಲ್ಲ.

ಪಚ್ಚೆ ಇದು ನವರತ್ನಗಳಲ್ಲಿ ಒಂದಾದ ಹಸಿರು ಹರಳು. ಇದರಿಂದ ಚಿನ್ನದಲ್ಲಿ ಓಲೆ, ಮೂಗುತಿ, ಉಂಗುರಗಳಾಗಿ ಸ್ತ್ರೀ, ಪುರುಷರು ಹಾಕಿಕೊಳ್ಳುತ್ತಾರೆ. ಇದನ್ನು ಹಾಕುವುದರಿಂದ ಶ್ರೀಮಂತರಾಗುತ್ತಾರೆ.

"ಲಂಬಾಣಿ ಸಮುದಾಯದಲ್ಲಿ ಮೈ ನೆರೆಯುವ ಮೊದಲೇ ಬಗೆ ಬಗೆಯ ಹಚ್ಚೆ ಹಾಕಿಸಿಕೊಳ್ಳುತ್ತಾರೆ. ಮೈ ನೆರೆದ ಬಳಿಕ ಹಚ್ಚೆ ಹಾಕಿಸಿಕೊಳ್ಳುವುದು 'ಅಧರ್ಮ'ಎಂದು ಅವರಲ್ಲಿ ನಂಬಿಕೆಯಿದೆ."[೧೨]

"ಲಂಬಾಣಿ ಸಮುದಾಯದಲ್ಲಿ ಮಕ್ಕಳಿಗೆ ದೃಷ್ಟಿಯಾಗದಿರಲೆಂದು, ಭೂತ, ಪಿಶಾಚಿ ಯಾವುದೇ ಗಾಳಿ ಸೋಂಕದಿರಲೆಂದು ಇವರು ಮೇಲು ಶಿಕಾರಿಗಳ ಕಡೆಯಿಂದ ಬಾಜರಬಟ್ಟೋ ಅನ್ನುವ ತಾಯಿತ ತಂದು ಮುಂಗೈಗೆ ಕಟ್ಟುತ್ತಾರೆ. ಹಾಗೆ ಸೊಂಟಕ್ಕೆ ಉಣ್ಣೆಗೊಂಡೆ ಕಾಶೀದಾರದೊಡನೆ ಸೇರಿಸಿ ಹೊಲಿದು ಕಟ್ಟಿಕೊಳ್ಳುತ್ತಿದ್ದರು."[೧೩]

"ಧಾರ್ಮಿಕ ಸಂಪ್ರದಾಯದ ಮುಸ್ಲಿಮ್ ಸಮುದಾಯದವರು ಕುರಾನದ ಆಯತ, ಪೈಗಂಬರರ ಹೆಸರು ಕೆತ್ತಿದ ತಾಮ್ರದ ತಗಡನ್ನು ತಾವೀಜ ರೂಪದಲ್ಲಿ ಸಿದ್ಧಪಡಿಸಿ ಕೊರಳಲ್ಲಿ, ರಟ್ಟೆಯಲ್ಲಿ ಕಟ್ಟಿಕೊಳ್ಳುತ್ತಾರೆ. ಹಾಗೆ ರೋಗ, ರುಜಿನಗಳು ಗುಣವಾಗಲೆಂದು ಕೆಲವರು ಸೂಫಿ, ಸಂತರ ಹೆಸರಿನಲ್ಲಿ ತಾಯಿತ ಹಾಕಿಕೊಳ್ಳುತ್ತಾರೆ."[೧೪]

"ಲಂಬಾಣಿ ಸಮುದಾಯದಲ್ಲಿ ಮಗು ಹುಟ್ಟಿದ ಹದಿನೈದು ದಿನಗಳು ಕಳೆದ ನಂತರ ಕೈಗೆ ಉಣ್ಣೆಯ ಬಿಳಿ ಬಿಳಿಯ ತಾಳ್ಡಿಹಾರ, ಪಾರಿಹಾರ, ಕಾಲಿಗೆ ಗರತಣಿ(ನೀಲಿಮಣಿಸರ) ಹಾಕುತ್ತಾರೆ.

ಮಗು ಹುಟ್ಟಿದ ಐದನೆಯ ದಿನಕ್ಕೆ 'ದಳವಾಧೋಕಾಯೆರೋ' ಕಾರ್ಯ ಮಾಡುತ್ತಾರೆ. ಅಂತಹ ಸಂದರ್ಭದಲ್ಲಿ ಮಗುವಿನ ಕೈಗೆ 'ಗೋಧಿಕಾಳುಗಳಿಂದ' ಪೋಣಿಸಿ ಮಾಡಿರುವ ಸರವನ್ನು ಕಟ್ಟುತ್ತಾರೆ."[೧೫]

ಹೆಣ್ಣು ಮಕ್ಕಳು ಋತುಮತಿಯಾದಾಗ ಕಿವಿಗೆ ಕನಿಯಾ ಮೂಗಿನಲ್ಲಿ ಪೂಲಿ, ಕೊರಳಲ್ಲಿ ಕೆಂಪು ಬಿಳಿಯ ತಾಳ್ಡಿಹಾರ, ಬೆಳ್ಳಿಯ ಹಾಂಸಲಿ, ಚಂದ್ರಾಕಾರದ, ರಪಿಯಾಹಾರ, ಮುಂಗೈಯಲ್ಲಿ ಬಿಳಿಯ ದಂತಿ ಚೂಡಿಗಳು ಮತ್ತು ಕೆಂಪು ಬೋದ್ಲು, ತಾಮ್ರದ ಬಳೆಗಳು, ಕೈಬೆರಳುಗಳಿಗೆ ಮಾಟ್ಲಿ, ಕಾಲಿಗೆ ತಾಮ್ರದ ವಾಂಕಿಯಾ ಗೆಜ್ಜೆ ಸರಗಳ ಜೋಡಿ, ಕಾಲ್ಬೆರಳಿಗೆ ಚಟಕಿ ಹಾಕಿಕೊಳ್ಳುತ್ತಾರೆ.

ಸಂಪ್ರದಾಯ, ಆಚರಣೆಯಂತೆ ಇವರು ಮದುವೆಯಲ್ಲಿಯೂ ವಿಶೇಷ ಆಭರಣಗಳನ್ನು ಹಾಕಿಕೊಳ್ಳುತ್ತಾರೆ. "ಮುಂಗೂದಲಿಗೆ ಇಳಿಬಿಟ್ಟ 'ಘೂಗುರಿ' ಮತ್ತು ಎರಡು ಮುಂಗೈಗಳಿಗೆ ಹಾಕಿರುವ ಚೂಡೋ ಇವೆರಡೂ ಲಂಬಾಣಿ ಸಮುದಾಯದ ಸ್ತ್ರೀಯರ ಸುಮಂಗಲೆಯ ಸಂಕೇತವಾಗಿದೆ. ರಟ್ಟೆಗೆ ಕಸೋಟಿಯಾ, ಮೂಗಿನಲ್ಲಿ ಭೂರಿಯಾ, ತುರುಬಿನಲ್ಲಿ ಅಂಟಿಗೆ ಟೋಪರೂಪೇರ, ಕವಡಿಸರ, ಉಣ್ಣೆಯಗೊಂಡೆ ಮತ್ತು ಕವಡೆಯ ಚೋಕಡಿ ಹಾಕುತ್ತಾರೆ. ಕಾಲಿಗೆ ಕಸ್, ಕೈ ಬೆರಳುಗಳಿಗೆ ಬೆಳ್ಳಿನಾಣ್ಯ ಬೆಸೆದು ಮಾಡಿರುವ ವಿಂಟಿ, ಚಾಲಾವಿಂಟಿ, ಕಾಲ್ಬೆರಳಿಗೆ ಬಿಚವಾ ಚಟಕಿ ಕಾಲಲ್ಲಿ ದೊಡ್ಡ ಬೆಳ್ಳಿಯ ಕಡಗ, ಹಣೆಯ ಮೇಲೆ ಟಿಕಿಯಾ ಇರುತ್ತದೆ."[೧೬] ಇವೆಲ್ಲವೂ ಇವರು ವಿಶೇಷ ಸಂದರ್ಭದಲ್ಲಿ ಹಾಕಿಕೊಂಡಿರುತ್ತಾರೆ.

ಇವರಲ್ಲಿ ಬಾಣಂತಿಯರಿದ್ದಾಗ "ಮೂಗಿನಲ್ಲಿ ಹಾಕುವ ಭೂರಿಯಾ (ಮೂಗುತಿ) ಕಾಲುಬೆರಳಿಗೆ ಹಾಕುವ 'ಚಟಕಿ' ಬಿಚವಾ ಮಾತ್ರ ಇರುತ್ತದೆ."[೧೭] "ಉಳಿದೆಲ್ಲವನ್ನು ಅವರು ತೆಗೆದಿಡುತ್ತಾರೆ. ಇವರಲ್ಲಿ 'ದಳವಾಧೋಕಾಯೇರೋ' ಕಾರ್ಯ ಮಾಡುತ್ತಾರೆ. ಅದು ಮಾಡುವವರೆಗೂ ಮುಂಗೂದಲು ಕಟ್ಟುವುದಿಲ್ಲ."[೧೮] ಐದನೆಯ ದಿವಸದ ಕಾರ್ಯ ಮಾಡಿದ ನಂತರ ಮೊದಲಿನಂತೆ ಎಲ್ಲಾ ಒಡವೆಗಳನ್ನು ಕೆಲವರು ಒಂದು ತಿಂಗಳ ನಂತರ ಒಡವೆಗಳನ್ನು ಧರಿಸುತ್ತಾರೆ.

ಗಂಡ ಸತ್ತ ನಂತರ ಲಂಬಾಣಿ ಸಮುದಾಯದ ಹೆಣ್ಣುಮಕ್ಕಳು ವಿಧವೆಯಾದಾಗ ಅವಳ "ಮುತ್ತೈದೆಯ ಸಂಕೇತವಾದ ಮುಂಗೂದಲಿಗೆ ಇಳಿಬಿಟ್ಟ 'ಘುಗರಿ' ರಟ್ಟೆಯಲ್ಲಿ ಹಾಕಿರುವ ಚುಡೋ ಇವುಗಳನ್ನು ಸಂಪ್ರದಾಯದಂತೆ ತೆಗೆಯುತ್ತಾರೆ."[೧೯] ಕೆಲವರು ಬೆಳ್ಳಿಯ ಹಾಂಸಲಿ, ಚಂದ್ರಾಕಾರದ ರಪಿಯಾಹಾರ, ಕಾಲಲ್ಲಿಯ ಬೆಳ್ಳಿಯ ಕಡಗ, ಮೂಗಿನಲ್ಲಿಯ ಬಂಗಾರದ ಭೂರಿಯಾ ಆಭರಣಗಳನ್ನು ತೆಗೆದಿಡುತ್ತಾರೆ.

ಮುಸ್ಲಿಂ ಸಮುದಾಯದಲ್ಲಿ ಪೈದಾಯಿಶ್(ಜನ್ಮೋತ್ಸವ), ಅಕೀಕಾ(ಕೇಶಮುಂಡನ), ಖತ್ನಾ(ಸುನತಿ), ಶಾದೀ(ಮದುವೆ), ವಫಾತ್(ಶವಸಂಸ್ಕಾರ).

**ಅಕೀಕಾ(ಕೇಶಮುಂಡನ):** ಮಗು ಜನಿಸಿದ ಏಳನೆಯ ದಿನದಲ್ಲಿ ಈ ನಾಮಕರಣವನ್ನು ಮಾಡುತ್ತಾರೆ. ಅನಿವಾರ್ಯ ಕಾರಣದಿಂದ ಆ ದಿನ ಆಗದಿದ್ದರೆ ಏಳು ವರ್ಷದಲ್ಲಿ ಯಾವುದಾದರೊಂದು ದಿನ ಇದನ್ನು ಆಚರಿಸಲಾಗುತ್ತದೆ. ಮೊದಲು ಕೂದಲನ್ನು ಕತ್ತರಿಸಿ ನಂತರ ಕೂದಲಿನ ತೂಕದಷ್ಟು ಬೆಳ್ಳಿಯನ್ನು ಬಡವರಿಗೆ ದಾನ ಮಾಡುತ್ತಾರೆ. ಬೆಳ್ಳಿಕೂದಲು ಆಗದಿದ್ದರೆ ಧವಸ, ಧಾನ್ಯ ಕೊಡಬಹುದು.

"**ಶಾದಿ(ಮದುವೆ):** ಮದುವೆ ಸಂದರ್ಭದಲ್ಲಿ ಮದುಮಗಳಿಗೆ ತಲೆಯಲ್ಲಿ ಚಾಂದತಾರಾಪಟ್ಟಿ, ಬೈತಲೆಯಲ್ಲಿ ಮಾಂಗಟೀಲಾ, ಚಮಕಿ, ಬಿಂದಿಯಾ, ಕಿವಿಯಲ್ಲಿ ಪೂಲಾ, ಜುಮಕಿ, ಡಾಗಬೇಲ, ಮೂಗಿನಲ್ಲಿ ಪುಲ್ಲಿಬುಲಾಕು, ಕೊರಳಲ್ಲಿ ಬೋರಮಾಳ, ಚಪಲಹಾರ, ನೆಕ್‌ಲೇಸ್, ರಟ್ಟೆಯಲ್ಲಿ ಬಾವುಟಿ, ಕೈಯಲ್ಲಿ ಚೂಡಿಯಾ ಕಂಗನ್ ಹಾಕುವರು. ಹಾಗೂ ಪಂಜಾ (ಮನಘಟ್) ಎಂಬ ವಿಶಿಷ್ಟ ಮುಂಗೈ ಆಭರಣಗಳನ್ನು ಹಾಕುತ್ತಾರೆ. ಬೆರಳಿಗೆ ಉಂಗುರ, ಕಾಲಿಗೆ ಚೈನು ಹಾಕುವರು.

ಮದುಮಗನಿಗೆ ಕಣ್ಣಿಗೆ ಸುರಮಾ ಹಚ್ಚಿ ಬೆರಳಿಗೆ ಉಂಗುರ ತೊಡಿಸಿ, ಕೊರಳಿಗೆ ಚೈನು ಹಾಕುವರು."[೨೦]

ನಿಖಾ ಆದ ನಂತರ ವರನ ಕಡೆಯವರು ತಂದ 'ಕರಿಮಣಿ' ಸರವನ್ನು ಮುತ್ತೈದೆಯಾದವರು ಮದುಮಗಳಿಗೆ ಕಟ್ಟುವರು. ಹಾಗೆ ನತ್ಥನಿ ಕಾಲ್ಬೆರಳಲ್ಲಿ ಪಿಲ್ಲಿ ಜೋಡವೆ ತೊಡಿಸುವರು. ಹೀಗೆ ಭಾರತೀಯ ಮುಸ್ಲಿಮ್ ಜನಾಂಗದ ಉಡುಗೆ-ತೊಡುಗೆಗಳು ತಮ್ಮದೇ ಆದ ವಿಶಿಷ್ಟ ಛಾಪಿನಿಂದ ಪ್ರಚಲಿತದಲ್ಲಿವೆ. ಆದರೆ ಇತ್ತೀಚೆಗೆ ಕಾಲಕ್ಕೆ ತಕ್ಕಂತೆ ತಮ್ಮ ಸಂಪ್ರದಾಯಸ್ಥ ಉಡುಗೆ ತೊಡುಗೆಗಳಲ್ಲಿ ತಕ್ಕಮಟ್ಟಿನ ಬದಲಾವಣೆಗಳನ್ನು ತಂದುಕೊಂಡು ತಮ್ಮ ಸಮುದಾಯವಲ್ಲದ ಇತರೆ ಸಮುದಾಯಗಳ ತೊಡುವ ಉಡುಗೆ ತೊಡುಗೆಗಳಿಗೆ ಹೊಂದಿಕೊಳ್ಳುತ್ತಿರುವುದು ಕಂಡುಬರುತ್ತದೆ.

ಪಾಂಚಳರು ಅಂದರೆ ಬಡಗಿ, ಕಮ್ಮಾರ, ಅಕ್ಕಸಾಲಿ, ಕಂಚುಗಾರ, ಶಿಲ್ಪಿ ಎನ್ನುತ್ತಾರೆ. ಅದರಲ್ಲಿ ಅಕ್ಕಸಾಲಿಗರ ನಂಬಿಕೆ ನಿಷೇಧದ ಬಗ್ಗೆ ತಿಳಿಯಬಹುದಾಗಿದೆ.

ನಂಬಿಕೆ, ರೋಗನಿಷೇದ, "ವಿಭಾಗದಲ್ಲಿ ಪಾಂಚಾಳ ವೃತ್ತಿಯವರಿಗೆ ನಿರ್ದಿಷ್ಟವಾದ ನಂಬಿಕೆಗೆ ಸಂಬಂಧಿಸಿದ ಪದಗಳನ್ನು ಸಂಕಲಿಸಲಾಗಿದೆ. ಪಾಂಚಾಳ ವೃತ್ತಿಯವರಿಗೆ ಕಾಳಮ್ಮ, ಗಾಯತ್ರಿ, ಬರ್ಮ(ಬ್ರಹ್ಮ) ಈ ಮೂರು ದೇವತೆಗಳು ವೃತ್ತಿಯ ಮೂಲ ದೇವರೆಂದು ಗುರುತಿಸುತ್ತಾರೆ. ಅಮಾವಾಸ್ಯೆಯಂದು ಪಾಂಚಾಳರು ಯಾವುದೇ ನಿರ್ಮಾಣ ಕೆಲಸವನ್ನು ಮಾಡುವುದಿಲ್ಲ. ಆದರೆ ದೈವ ಸಂಬಂಧಿ ಕೆಲಸಗಳನ್ನು ಮಾತ್ರ ಮಾಡುತ್ತಾರೆ."[೨೧]

ಪಾಂಚಾಳರಿಗೆ ದರಸಾ ಪ್ರಮುಖವಾದ ಹಬ್ಬ."ಹುಸಿಪೆಟ್ಟು', 'ಕುಲುಮೆಉರಿ' > ನಂಬಿಕೆ, ನಿಷೇಧಗಳಲ್ಲಿ ಈ ತರಹದ ವಿಶಿಷ್ಟ ಪದಗಳು ಇವೆ. ಹುಸಿಪೆಟ್ಟು-ಒಂದು ಕೆಲಸಮಾಡುವಾಗ ಸುತ್ತಿಗೆಯಿಂದ ವಸ್ತುವನ್ನು ಬಡಿಯುತ್ತಿರುವಾಗ ಏಟು ವಸ್ತುವಿಗೆ ಬೀಳದೆ ಬೇರೆಡೆಗೆ ಬಿದ್ದರೆ ಅಪಶಕುನವೆಂದು ಭಾವಿಸುತ್ತಾರೆ. ಕುಲುಮೆ ಉರಿ ಕಮ್ಮಾರರು ವರ್ಷದ ಆರಂಭದಲ್ಲಿ ಕುಲುಮೆ

ಹತ್ತಿಸಿದಾಗ ಉರಿ ಯಾವ ಕಡೆ ತಿರುಗುವುದೋ ಆ ಭಾಗದಲ್ಲಿ ಮಳೆ ಬೆಳೆ ಚೆನ್ನಾಗಿ ಆಗುತ್ತದೆ ಎಂದು ಇವರು ನಂಬುತ್ತಾರೆ.

ಪಾಂಚಾಳರಿಗೆ ಶಿಲ್ಪಗಳಲ್ಲಿ ಅನೇಕ ನಂಬಿಕೆಗಳಿವೆ. ಮೂರ್ತಿಯ ದೃಷ್ಟಿಗೆ ಸಂಬಂಧಿಸಿದಂತೆ ಯಾವ ಶಿಲ್ಪಿಯೂ ಮೂರ್ತಿಯನ್ನು ಕಡೆದಿರುತ್ತಾನೋ ಆತನೇ ಮೂರ್ತಿಯನ್ನು ಪ್ರತಿಷ್ಠಾಪಿಸುವ ಸಂದರ್ಭದಲ್ಲಿ 'ದೃಷ್ಟಿ' ಇಡಬೇಕು ಅಥವಾ ನೇತ್ರೋನ್ಮಿಲವನ್ನು ಮಾಡಬೇಕು. ಅದು ಮೂರ್ತಿ ನಿರ್ಮಾಣದಲ್ಲಿ ಕಡೆಯ ಕೆಲಸವಾಗಬೇಕು. ಹಾಗೆ ಇಟ್ಟ ದೃಷ್ಟಿ ಸರಿಯಿಲ್ಲದಿದ್ದರೆ ಊರಿಗೆ ದೃಷ್ಟಿ ಇಡುವವನಿಗೆ ಕೆಡಕಾಗುತ್ತದೆ ಎಂದು ಭಾವಿಸುತ್ತಾರೆ. ಮೂರ್ತಿ ತಯಾರಿಸುವವನಿಗೆ ವೇದಗಳು ಗೊತ್ತಿರಬೇಕು. ಹಾಗೂ ಆತನಿಗೆ ಯಾವುದೇ ವಿಧವಾದ ರೋಗರುಜಿನಗಳಿರಬಾರದು ಮತ್ತು ವಿಕಲಾಂಗನಾಗಿರಬಾರದು ಎಂಬ ನಂಬಿಕೆಯಿದೆ."[೨೨]

ಪಾಂಚಳ ವೃತ್ತಿ ಪದಕೋಶದ ಭಾಷೆಯಲ್ಲಿ "ಜನಾಂಗದವರ ವೃತ್ತಿ ಪ್ರವೇಶದಿಂದಾಗಿ ಮುಸಲ್ಮಾನರ ಅನೇಕ ಬಗೆಯ ಪದಗಳು ದಾಖಲಾಗಿವೆ. ಆಭರಣಗಳಿಗೆ ಸಂಬಂಧಿಸಿದ ಪದಗಳಿಗೆ ಈ ತರಹದ ನಿರಂತರ ಚಲನಶೀಲತೆಯಿಂದ ವಿನ್ಯಾಸಗಳು ಬದಲಾದಂತೆಲ್ಲ ಅನೇಕ ಹೊಸ ಪದಗಳು ನಿಷ್ಪನ್ನವಾಗುತ್ತಿರುತ್ತವೆ. ಚಾಂದ್‌ಪತ್ತ, ಚಾಕ್ಕಿ, ಜಾಲ್ರಾ, ಟಾಪ್ಸ್, ಟಿಕ್ಕಿ, ರಿಂಗ್ಸ್ ಮುಂತಾದ ಅನ್ಯದೇಶಿ ಪದಗಳು ಮತ್ತು ಕನ್ನಡದ ಪದಗಳೊಂದಿಗೆ ಅನ್ಯದೇಶಿ ಪದಗಳು ಸೇರಿ ವಿಶಿಷ್ಟವಾದ ನಿಷ್ಪನ್ನ ಪದಗಳು ಸೃಷ್ಟಿಯಾಗುತ್ತಿರುತ್ತವೆ. ಉದಾಹರಣೆಗೆ 'ಜಾಲ್ರಾ' ದಿಂದ 'ಗುಂಡಿನ ಜಾಲ್ರಾ', ಮುತ್ತಿನ ಜಾಲ್ರಾ, ಅಳ್ಳಿನ ಜಾಲ್ರಾ, ಟಿಕ್ಕೆ=ವಜ್ಜಿನ ಟಿಕ್ಕೆ, ಗೆಜ್ಜೆ ಟಿಕ್ಕೆ, ಜೀರಮಣಿ ಟಿಕ್ಕೆ ಇತ್ಯಾದಿ."[೨೩]

**ನಂಬಿಕೆ, ದೈವ, ರೋಗ, ನಿಷೇದ**

"ಅಕ್ಕಸಾಲಿಗರು ಅಮವಾಸ್ಯೆ ಸಂದರ್ಭದಲ್ಲಿ ಕೃಷಿ ಅಥವಾ ಸಾರ್ವಜನಿಕರಿಗೆ ಸಂಬಂಧಿಸಿದ ಯಾವುದೇ ಕೆಲಸಗಳನ್ನು ಮಾಡುವುದಿಲ್ಲ. ಆದರೆ ದೇವರ ದೈವ ಸಂಬಂಧಿ ಕೆಲಸಗಳಾದ ದೇವರ ಮೂರ್ತಿ, ದೇವಸ್ಥಾನಕ್ಕೆ ಸಂಬಂಧಿಸಿದ ಕೆಲಸಗಳನ್ನು ಮಾತ್ರ ಮಾಡುತ್ತಾರೆ."[೨೪]

"ಅಕ್ಕಸಾಲಿಗರು ವರ್ಷದಲ್ಲಿ ಬರುವ ಪ್ರಮುಖ ಹಬ್ಬಗಳಲ್ಲಿ ತಾವು ದಿನನಿತ್ಯ ಬಳಸುವ ಉಪಕರಣಗಳನ್ನೆಲ್ಲ ಪೂಜೆ ಮಾಡಿ ಕೆಲಸಕ್ಕೆ ಬಿಡುವು ಕೊಡುತ್ತಾರೆ.

ಅಕ್ಕಸಾಲಿಗರು ಕೆಲಸಮಾಡುವ ಮನೆಯ ಬಾಗಿಲು ಉತ್ತರ ದಿಕ್ಕಿನಲ್ಲಿ ಇರಬಾರದು ಎಂಬ ನಂಬಿಕೆ ಇದೆ."[೨೫]

"ಅಕ್ಕಸಾಲಿಗರು ಕಿವಿಯಲಿ ಆಭರಣ ಧರಿಸುವಂತೆ ರಂದ್ರಮಾಡುವ ಕೆಲಸವನ್ನೂ ಸಹ ಮಾಡುತ್ತಾರೆ.

ಅಕ್ಕಸಾಲಿಗ ಸಮುದಾಯದವರು (ದೈವಜ್ಞ) ದೇವರನ್ನು ತಿಳಿದವರು ಎನ್ನುವ ನಂಬಿಕೆ ಇದೆ."[೨೬]

“ಜನಪದದ ಪ್ರತಿಯೊಂದು ಕೆಲಸ ಕಾರ್ಯ, ಆಲೋಚನೆ, ರೂಢಿ, ಸಂಪ್ರದಾಯ ಜೀವನ ಕ್ರಮಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಮತ್ತು ಅದರ ಉಪ ನಂಬಿಕೆಗಳಿಂದ ಅಧಿಕಾರ ಪಡೆದಿವೆ. ಜನಪದರು ಜೀವಿಸಿದಂತೆ ಅವರ ಸಂಸ್ಕೃತಿ ಇರುತ್ತದೆ. ಜನಪದರ ಮಾತುಕತೆ, ನಡವಳಿಕೆ, ನಂಬಿಕೆಗಳ ಮೇಲೆ ರೂಪಗೊಂಡಿರುತ್ತದೆ. ಅದರಲ್ಲಿ ನಂಬಿಕೆಗೆ ಹೆಚ್ಚು ಪ್ರಾಧಾನ್ಯತೆ. ಅದು ಎಷ್ಟೋ ಸಲ ಮೂಢನಂಬಿಕೆಯಾಗಿರಬಹುದು. ಅದನ್ನೇ ನಂಬಿ ಅವರು ಆಚರಿಸುವರು.

* ಬಸುರಿ ಹಾವು ನೋಡಬಾರದು
* ಮಗುವನ್ನು ಕಾಲಿನಿಂದ ಮುಟ್ಟಬಾರದು
* ಬಾಗಿಲ ಹೊಸ್ತಿಲ ಮೇಲೆ ನಿಂತು ಸೀನಬಾರದು
* ಒಂಟಿ ಸೀನು ಒಳ್ಳೆಯದಲ್ಲ
* ಬೆಕ್ಕು ಅಡ್ಡ ಹಾಯಬಾರದು

ಹೀಗೆ ನೂರಾರು ನಂಬಿಕೆಗಳನ್ನು ಇಟ್ಟುಕೊಂಡು ಜನಪದರು ಬಾಳುತ್ತಾರೆ. ಅದರಂತೆ ನಡೆಯಲು ಪ್ರಯತ್ನಿಸುತ್ತಾರೆ. ಅನುಭವ ಬಲದಿಂದ ಆದ ಅನಾಹುತಕ್ಕೆ ಪರಿಹಾರ ಕಂಡುಹಿಡಿಯಲು ಅವರು ಯತ್ನಿಸುವರು.”[೨೭]

“ಹಿಂದೂ ಧರ್ಮವು ಅತೀ ಪುರಾತನ ಧರ್ಮಗಳಲ್ಲಿ ಒಂದಾಗಿದೆ. ಅದರಲ್ಲಿ ನಾನಾ ರೀತಿಯ ನಂಬಿಕೆ, ಸಂಪ್ರದಾಯ, ಆಚರಣೆ ಹಾಗೂ ಹಲವಾರು ತಾತ್ವಿಕ ನೆಲೆಗಳಿವೆ.”[೨೮] “ಹಿಂದೂ ಧರ್ಮದಲ್ಲಿ ಆಚಾರ ಹಾಸುಹೊಕ್ಕಾಗಿದೆ. ಹೆಜ್ಜೆ ಹೆಜ್ಜೆಗೂ ಆಚಾರ ಬೆಳಿಗ್ಗೆ ದೇವರ ಹೆಸರನ್ನು ಹೇಳಿಕೊಂಡು ಕಣ್ಣು ಬಿಡುವುದರಿಂದ ಆಚಾರ ಪ್ರಾರಂಭವಾಗಿ ರಾತ್ರಿ ದೇವರ ಹೆಸರನ್ನೇ ಹೇಳಿಕೊಂಡು ಕಣ್ಣು ಮುಚ್ಚಿಕೊಳ್ಳುವ ತನಕ ಆಚರಣಾಮಯವಾಗಿದೆ.”[೨೯]

“ಹಿಂದೂ ಧರ್ಮದಲ್ಲಿರುವ ಮುಖ್ಯವಾಗಿ ಆಚರಣೆಗಳಾದ ಯಜ್ಞ ಯಜ್ಞಕ್ಕೆ ಕೊಡುವ ಪ್ರಾಣಿಬಲಿ, ಇಂದ್ರಜಾಲ, ಮಂತ್ರಪಠಣ ಮಾಡುವುದರಿಂದ ಅದ್ಭುತವಾದ, ಆಶ್ಚರ್ಯಕರವಾದ ಫಲ ಕೊಡುತ್ತದೆ ಎಂಬ ಕಲ್ಪನೆಗಳೆಲ್ಲವೂ ನಂಬಿಕೆಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿವೆ. ಹಿಂದೂ ಧರ್ಮದಲ್ಲಿ ಇನ್ನೂ ಮುಂದೆ ಹೋಗಿ ಮಂತ್ರ ಫಠಣ ಮಾಡುವುದರಿಂದ ದೇವ ದೇವತೆಗಳನ್ನು ವಶೀಕರಿಸಿಕೊಳ್ಳಲೂಬಹುದು ಎಂದು ನಂಬಿಕೊಂಡಿರುತ್ತಾರೆ. ಈ ದೇವ ದೇವತೆಗಳೇ ಸರ್ವ ಕಾರಣಗಳಿಗೂ ಕಾರಣ ಎಂಬ ನಂಬಿಕೆಯನ್ನು ಕಾಣಬಹುದು.”[೩೦]

“ಧರ್ಮ ತಳಹದಿಯೇ ನಂಬಿಕೆ ಮತ್ತು ಆಚರಣೆ. ಇಲ್ಲಿರುವ ಕಲ್ಪನೆಗಳಾದ ಮೋಕ್ಷ ಸಾಧಿಸಲು ಇರುವ ಮಾರ್ಗಗಳಾದ ಕರ್ಮ, ಜ್ಞಾನ, ಭಕ್ತಿ ಮುಂತಾದವುಗಳ ಜೊತೆಗೆ ತ್ರಿಮೂರ್ತಿ ಕಲ್ಪನೆ ಶಕ್ತಿ, ಕಾಳಿ, ದುರ್ಗ, ಮಾರಿ, ಪೂಜೆ, ಅವತಾರಗಳು, ಆಶ್ರಮ ಧರ್ಮಗಳು,

ಈ ಮೂಲ ರೂಪವನ್ನು ಇಂದಿಗೂ ಮದುವೆ ಮುಂತಾದ ಶುಭ ಕಾರ್ಯಗಳಲ್ಲಿ ಕಾಣುತ್ತೇವೆ. ವಧು-ವರರು ಎಷ್ಟೇ ಆಭರಣಗಳನ್ನು ಹಾಕಿಕೊಂಡರೂ ಹೂವಿನ ಮಾಲೆಗಳನ್ನು ಹಾಕುವುದನ್ನು ಮಾತ್ರ ಬಿಡುವುದಿಲ್ಲ. ಕೆಲವು ಜನಾಂಗಗಳಲ್ಲಿ ಸೊಪ್ಪಿನ ಮಾಲೆ ಹಾಕಿಕೊಳ್ಳುವುದು, ಅದನ್ನು 'ಸುಮನ್‌ಮಾಲೆ' ಎಂದು ಕರೆಯಬಹುದು.

ಕಾಲ ಬದಲಾದಂತೆ ಆಭರಣಗಳಲ್ಲಿ ಭಿನ್ನ ರೀತಿಯ ವ್ಯತ್ಯಾಸಗಳು ಕಂಡುಬರುತ್ತಿವೆ. ಸಂಪ್ರದಾಯ, ಆಚರಣೆ, ನಂಬಿಕೆಗಳನ್ನು ಬದಲಾಯಿಸಿ ಹೊಸ ಮಾದರಿಗಳತ್ತ ಮನಸೋಲುತ್ತಿರುವುದನ್ನು ಗಮನಿಸಬಹುದು. ಮೊದಲು ಕೈಬೆರಳಿಗೆ ಉಂಗುರ ತೊಡುವ ಪದ್ಧತಿ ಇರಲಿಲ್ಲ. ಅದರ ಬದಲಾಗಿ ಮೊದಲು ಮದುವೆ ನಿಶ್ಚಯ ಮಾಡುವಾಗ ಎಲೆ, ಅಡಿಕೆ, ಪರಸ್ಪರ ಬದಲಾಯಿಸಿಕೊಳ್ಳುತ್ತಿದ್ದರು. ಆದರೆ ಈಗ ಕಾಲ ಬದಲಾವಣೆಯಾದಂತೆ ಉಂಗುರವನ್ನು ಬದಲಾಯಿಸುವ ಮತ್ತು ತೊಡುವ ಪದ್ಧತಿ ರೂಢಿಗೆ ಬಂದಿದೆ.

ಲಂಬಾಣಿಗಳು ಅವರು ಘುಗುರಿ ಇದು ಮುತ್ತೈದೆಯ ಸಂಕೇತದಲ್ಲಿ ಇದನ್ನು ತಾಳಿ ಎಂದು ಹಾಕಿಕೊಳ್ಳುತ್ತಿದ್ದರು. ಕಾಲ ಬದಲಾದಂತೆ ಇವರು ಎಲ್ಲಾ ಸುಮುದಾಯದವರು ಹಾಕಿಕೊಳ್ಳುವ ಹಾಗೆ ಕೊರಳಲ್ಲಿ ತಾಳಿಯನ್ನು ಹಾಕಿಕೊಳ್ಳುತ್ತಿದ್ದಾರೆ. ಹಳೆಯ ಮಾದರಿಯನ್ನು ಬಿಟ್ಟು ಹೊಸ ಮಾದರಿಯ ಕಡೆಗೆ ಇವರು ಹೋಗುತ್ತಲಿದ್ದಾರೆ.

ಸ್ಥಿತ್ಯಂತರ ಆಗುತ್ತಿರುವುದು ಎಲ್ಲಿ? ವಸ್ತುವಿನಲ್ಲೋ, ವಸ್ತುವಿನ ಸ್ವರೂಪದಲ್ಲೋ ಎಂಬುದು ತಿಳಿಯಲಾಗಿದೆ. ಮೊದಲು ಬೆಳ್ಳಿಯಿಂದ ಆಭರಣಗಳು ಬರುತ್ತಿದ್ದವು. ನಂತರ ಬಂಗಾರ, ವಜ್ರ ಆಭರಣಗಳನ್ನು ತಯಾರಿಸಲಾಗುತ್ತಿವೆ. ಹಾಗೆಯೇ ಚಿನ್ನದಿಂದ ಮಾಡಿರುವಂತಹದ್ದು ಅದು ಬೆಳ್ಳಿಗೆ ಬಂದಿದೆ. ಹಾಗೆ ಚಿನ್ನ, ಬೆಳ್ಳಿಯನ್ನು ಎರಡು ಬಿಟ್ಟು ಪ್ಲಾಟಿನಮ್‌ಗೆ ಆಭರಣಗಳು ಬದಲಾವಣೆಯಾಗಿ ತಯಾರಿಸಲಾಗುತ್ತಿದೆ.

ಆರ್ಥಿಕ ಸ್ಥಿತಿ ಬದಲಾದಂತೆ ಇಲ್ಲಿಯೂ ಸಹ ಸ್ಥಿತ್ಯಂತರವಾಗುತ್ತಲಿದೆ. ಹಾಗೆ ಹೊಸ ಹೊಸ ಆಭರಣಗಳ ವಿನ್ಯಾಸಗಳು ಬಂದಾಗ ಜನರು ಹಳೆಯದನ್ನು ಬಿಟ್ಟು ಅದನ್ನೇ ಹೊಸ ಮಾದರಿಯಲ್ಲಿ ಆಭರಣಗಳನ್ನು ತಯಾರಿಸಿ ಹಾಕಿಕೊಳ್ಳುತ್ತಾರೆ. ಹೀಗೆ ಸ್ಥಿತ್ಯಂತರವಾಗುತ್ತದೆ. ಹೀಗೆ ಆಸಕ್ತಿಯಿಂದ ಸ್ಥಿತ್ಯಂತರವಾಗುತ್ತದೆ. ಹಾಗೆ ಇನ್ನೊಬ್ಬರು ಹಾಕಿಕೊಂಡಿರುವುದರಿಂದ ಅವರನ್ನು ನೋಡಿ ಅನುಕರಣೆಯಿಂದ ಸ್ಥಿತ್ಯಂತರವಾಗುತ್ತದೆ.

ಮಹಿಳೆಯರು ಮಾತ್ರ ಕಿವಿಗೆ ಕಿವಿಯ ರಿಂಗು ಹಾಕದೇ ಪುರುಷರು ಸಹ ಹಾಕಿಕೊಳ್ಳುತ್ತಿದ್ದಾರೆ. ಅದು ಏನೇ ಇರಲಿ ಅನುಕರಣೆಯಿಂದಲೋ, ಫ್ಯಾಷನ್‌ನಿಂದಲೋ ಒಟ್ಟಾರೆ ಹೀಗೆ ಸ್ಥಿತ್ಯಂತರವಾಗಿರುವುದು ಕಂಡು ಬರುತ್ತದೆ.

ಈಗ ಸಮಾಜದಲ್ಲಿ ಶ್ರೀಮಂತರು, ಮಧ್ಯಮವರ್ಗದವರು, ಬಡವರು ಭಿನ್ನ ಭಿನ್ನ ರೀತಿಯ ಒಡವೆ ಹಾಕಿಕೊಳ್ಳುತ್ತಿದ್ದಾರೆ. ಈಗಲೂ ಸಹ ಬೆಳ್ಳಿಯ ಆಭರಣಗಳು ಬಡವರು ಹಾಕುತ್ತಿದ್ದಾರೆ.

**ಕೊನೆ ಟಿಪ್ಪಣಿಗಳು**

೧. ಧಾನೇಶ್.ಎ.ಚೆಕ್ಕಿ, ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ, ಪುಟ, ೨೩.

೨. ಸೌಭಾಗ್ಯವತಿ.ಕೆ, ಜನಪದ ಆಭರಣಗಳು, ಪುಟ, ೧೭೩.

೩. ಅದೇ ಪುಟ, ೧೭೩.

೪. ಅದೇ ಪುಟ, ೧೭೪.

೫. ಅದೇ ಪುಟ, ೧೭೪.

೬. ಅದೇ ಪುಟ, ೧೭೪.

೭. ಅದೇ ಪುಟ, ೧೭೪.

೮. ಅದೇ ಪುಟ, ೧೭೪.

೯. ಅದೇ ಪುಟ, ೧೭೫.

೧೦. ಅದೇ ಪುಟ, ೧೭೮.

೧೧. ಅದೇ ಪುಟ, ೧೮೦.

೧೨. ಮುರಿಗೆಪ್ಪ.ಎಂ, ಜನಪದ ಸಾಹಿತ್ಯ ದರ್ಶನ–೨೧, ಪುಟ, ೧೦೭.

೧೩. ಅದೇ, ಪುಟ, ೧೧೩.

೧೪. ಸೌಭಾಗ್ಯವತಿ.ಕೆ, ಜನಪದ ಆಭರಣಗಳು, ಪುಟ, ೧೪೭.

೧೫. ಸಿಪಿಕೆ, ಜನಪದ ಸಾಹಿತ್ಯ ದರ್ಶನ, ಪುಟ, ೧೦೬.

೧೬. ಅದೇ, ಪುಟ, ೧೦೮.

೧೭. ಅದೇ, ಪುಟ, ೧೦೮.

೧೮. ಅದೇ, ಪುಟ, ೧೦೮.

೧೯. ಅದೇ, ಪುಟ, ೧೧೦.

೨೦. ಅದೇ, ಪುಟ, ೧೫೫.

೨೧. ಪಾಂಡುರಂಗಬಾಬು.ಡಿ,(ಲೇ), ಪಾಂಚಾಳ ವೃತ್ತಿ ಪದಕೋಶ, ಪ್ರಸ್ತಾವನೆ, ೭.

೨೨. ಅದೇ ಪುಟ, ೮.

೨೩. ಅದೇ ಪುಟ, ೮.

೨೪. ಅದೇ ಪುಟ, ೧೯.

೨೫. ಅದೇ ಪುಟ, ೨೦.

೨೬. ಅದೇ ಪುಟ, ೨೩.

೨೭. ಮಂಜುನಾಥ ಬೇವಿನಕಟ್ಟಿ, ಕನ್ನಡ ಜನಪದ ನಂಬಿಕೆಗಳು, ಪುಟ, ೫೮.

೨೮. ಅದೇ ಪುಟ, ೮೭.

೨೯. ಅದೇ ಪುಟ, ೮೮.

೩೦. ಅದೇ ಪುಟ, ೮೯.

೩೧. ಅದೇ ಪುಟ, ೮೯–೯೦.

೩೨. ಸೌಭಾಗ್ಯವತಿ ಕೆ, ಜನಪದ ಆಭರಣಗಳು, ಪು, ೩೩.

೩೩. ಅದೇ ಪುಟ, ೩೪.

❖❖❖

# ಅಧ್ಯಾಯ: ಆರು

## ಸಮಾರೋಪ

ಮಾನವನು ಪ್ರಾಚೀನ ಕಾಲದಿಂದಲೂ ಸೌಂದರ್ಯದ ಪರಿಕಲ್ಪನೆ ಹೊಂದಿದ್ದು, ಪ್ರಕೃತಿಯಲ್ಲಿ ದೊರೆಯುವ ಎಲೆ, ಬಳ್ಳಿ, ಹೂ ಮುಂತಾದ ವಸ್ತುಗಳನ್ನು ಆಭರಣಗಳಾಗಿ ಬಳಸುತ್ತ ಬಂದನು. ನಾಗರಿಕ ಪ್ರಜ್ಞೆ ಬೆಳೆದಂತೆಲ್ಲ ಹೊಸ ಹೊಸ ಲೋಹಗಳ ಅವಿಷ್ಕಾರಕ್ಕೆ ಮುಂದಾಗಿ ಬೆಳ್ಳಿ, ಬಂಗಾರ ಮುಂತಾದ ಲೋಹಗಳಿಂದ ತಯಾರಿಸಿದ ಆಭರಣಗಳ ಬಳಕೆಗೆ ಮುಂದಾದನು. ಈ ತೆರನಾಗಿ ಆಭರಣಗಳು ಕಾಲದಿಂದ ಕಾಲಕ್ಕೆ ರೂಪಾಂತರಗೊಂಡು, ಬದಲಾಗುತ್ತಾ ಬಂದವು.

ಆಭರಣಗಳ ವೈವಿಧ್ಯತೆಯು ಕಾಲಕ್ಕೆ ತಕ್ಕಂತೆ ಬದಲಾವಣೆಯನ್ನು ಕಂಡುಕೊಂಡವು. ಈ ಹಿಂದೆ ಜನರು ಬಳಸುವ ಆಭರಣಗಳು ಹಾಗೂ ಇಂದು ನಾವು ಹಾಕಿಕೊಳ್ಳುವಂತಹ ಆಭರಣಗಳನ್ನು ಗಮನಿಸಿದಾಗ ಅವರವರ ದೃಷ್ಟಿ ಹಾಗೂ ಕಾಲಮಾನಕ್ಕೆ ತಕ್ಕಂತೆ ಹೊಸ ಮಾದರಿಯ ವಿವಿಧ ಆಕಾರಗಳನ್ನು ಪಡೆಯುತ್ತಾ ಬಂದಿರುವುದನ್ನು ಕಾಣಬಹುದು.

ಹಿಂದಿನ ನಮ್ಮ ಪೂರ್ವಿಕರು ದೃಷ್ಟಿತಾಗಬಾರದೆಂಬ ಉದ್ದೇಶದಿಂದ ಆಭರಣಗಳನ್ನು ಧರಿಸುತ್ತಿದ್ದರು. ಮಹಿಳೆಯರು, ಪುರುಷರು, ಮಕ್ಕಳು ಎಲ್ಲರೂ ಸಮಾನವಾಗಿ ಧರಿಸುತ್ತಿದ್ದರು. ಇದು ಅವರಲ್ಲಿನ ಆಭರಣಗಳ ಮೇಲಿನ ಪ್ರೀತಿಯನ್ನು ತೋರಿಸುತ್ತದೆ.

ಆಭರಣಗಳು ಮತ್ತು ಭಾಷೆ ಇದರಲ್ಲಿ ಆಭರಣಗಳ ಇತಿಹಾಸ ಮತ್ತು ಅದರ ರಚನೆ, ಮೊದಲು ಆಭರಣಗಳು ಬಳಕೆಯಾಗಿರುವ ಮಾಹಿತಿಯನ್ನು ತಿಳಿಯಬಹುದಾಗಿದೆ.

ಆಭರಣಗಳ ವರ್ಗೀಕರಣ, ವಯೋಮಾನಕ್ಕನುಗುಣವಾಗಿ ಬದಲಾವಣೆ ಹೊಂದಿರುವುದು ಹಾಗೆ ಅದರಲ್ಲಿ ಬಳಕೆಯಾದ ಆಭರಣಗಳ ಹೆಸರುಗಳು ವಿವಿಧ ರೀತಿಯ ಭಿನ್ನತೆಯನ್ನು ತಿಳಿದುಕೊಳ್ಳಲಾಗಿದೆ. ಆಚಾರ-ಸಂಪ್ರದಾಯಕ್ಕೆ ತಕ್ಕಂತೆ ಆಭರಣಗಳು ಬಳಕೆಗೊಂಡಿರುವುದು ಕಂಡುಬರುತ್ತದೆ.

ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿರುವ ಆಭರಣಗಳನ್ನು ಹಾಗೂ ಮೈಸೂರಿನ ಭಾಗದಲ್ಲಿ ಬಳಕೆಯಲ್ಲಿರುವ ಆಭರಣಗಳನ್ನು ತುಲನಾತ್ಮಕವಾಗಿ ನೋಡಿದಾಗ ಪ್ರಾದೇಶಿಕ ಭಿನ್ನತೆ ಹಾಗೂ ವೈವಿಧ್ಯತೆ ಕಂಡುಬರುತ್ತದೆ.

ಆಭರಣಗಳು ಮತ್ತು ಭಾಷೆಯಲ್ಲಿ, ಆಭರಣಗಳ ಭಾಷಿಕ ಘಟಕಗಳು, ಏಕಪದ ಘಟಕಗಳನ್ನು ನೋಡುತ್ತೇವೆ. ಅಂದರೆ ಓಲೆ, ಬಳೆ, ಹೀಗೆ ಒಂದೇ ಪದ ಹೊಂದಿರುವಂತದ್ದನ್ನು ತಿಳಿಯುವುದಾಗಿದೆ. ಹಾಗೆ ಒಂದು ಆಭರಣದ ಹೆಸರುಗಳ ವಿಶೇಷಣವನ್ನು ತಿಳಿಸುವ ವಿಶೇಷಣಯುಕ್ತ ಘಟಕಗಳನ್ನು ಸಹ ನೋಡಬಹುದು. 'ಸರ' ಎಂದಾಕ್ಷಣ ಅದು ಎಂತಹ ಸರ, ಮುತ್ತಿನ ಸರವೋ, ಗುಂಡಿನ ಸರವೋ, ಕಾಸಿನ ಸರವೋ ಎಂಬ ವಿಶೇಷತೆಗಳನ್ನು ಒಳಗೊಂಡಿರುತ್ತದೆ. ಜನಪದರ ಸಾಹಿತ್ಯವಾದ ಗಾದೆ, ಒಡಪು, ಒಗಟು, ಹಾಡುಗಳಲ್ಲಿ ಸಹ ಆಭರಣಗಳ ಕುರಿತು ಉಲ್ಲೇಖಗಳು ದೊರೆಯುತ್ತವೆ. ಜೊತೆಗೆ ಅವುಗಳ ಮಹತ್ವವನ್ನು ಕುರಿತು ಹೇಳಿರುವುದು ತಿಳಿದುಬರುತ್ತದೆ.

ಮಾನವನ ಜೀವನ ವಿಧಾನ, ಧಾರ್ಮಿಕ ಆಚರಣೆ, ಸಂಪ್ರದಾಯ ಮತ್ತು ನಂಬಿಕೆ ಇವುಗಳ ಜೊತೆ ಜೊತೆಗೆ ಆಭರಣಗಳು ಮನುಷ್ಯನ ಬದುಕಿನಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ. ಆಭರಣ ಸೃಷ್ಟಿಗೂ ಮೊದಲು ಮಾನವನು 'ತಾಯಿತ'ಗಳನ್ನು ಕಟ್ಟಿಕೊಳ್ಳುತ್ತಿದ್ದನೆಂದು ಹೇಳಲಾಗುತ್ತದೆ. ಸುಮಾರು ಹನ್ನೆರಡು ಸಾವಿರ ವರ್ಷಗಳಷ್ಟು ಹಿಂದೆಯೇ ಮನುಷ್ಯ ಆನೆದಂತ, ಕವಡೆ, ಸಿಂಪು, ಶಂಖಗಳ ಸರ ಧರಿಸಿದ್ದನೆಂದು, ಸುಮಾರು ಎಂಟು ಸಾವಿರ ವರ್ಷಗಳ ಹಿಂದೆ ತಾಯಿತಗಳನ್ನು ಕಟ್ಟಿಕೊಂಡನೆಂದು ತಿಳಿದುಬರುತ್ತದೆ.

**ಅಧ್ಯಯನದ ಫಲಿತಗಳು**

ಈ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಈ ಕೆಳಗಿನಂತೆ ಕ್ರೋಢಿಕರಿಸಲಾಗಿದೆ.

* ಇಲ್ಲಿ ಆಭರಣಗಳ ಹೆಸರುಗಳು ಹಾಗೂ ಉತ್ತರ ಕರ್ನಾಟಕದಲ್ಲಿ ಧರಿಸುವ ಆಭರಣಗಳು ಮತ್ತು ಮೈಸೂರು ಭಾಗದಲ್ಲಿ ಧರಿಸುವಂತಹ ಆಭರಣಗಳ ಕುರಿತು ವಿಶ್ಲೇಷಿಸಲಾಗಿದೆ.
* ಈ ಅಧ್ಯಯನದಲ್ಲಿ ಐವತ್ತಕ್ಕೂ ಹೆಚ್ಚು ಹೊಸ ಆಭರಣಗಳ ಉಲ್ಲೇಖ ಮಾಡಲಾಗಿದೆ. ಹಳೆಯ ಆಭರಣಗಳು ಮತ್ತು ಕಾಲಮಾನಕ್ಕೆ ತಕ್ಕಂತೆ ಬದಲಾದ ಆಭರಣಗಳ ಸ್ವರೂಪವನ್ನು ಕುರಿತು ಮಾಹಿತಿಯನ್ನು ದಾಖಲಿಸಲಾಗಿದೆ.
* ಆಭರಣಗಳ ಹೆಸರುಗಳ ಜೊತೆಗೆ ಅವುಗಳ ಬಗ್ಗೆ ಜನರಿಗಿರುವ ನಂಬಿಕೆ, ಆಚರಣೆ, ನಿಷೇಧದ ಬಗ್ಗೆಯೂ ಉಲ್ಲೇಖಿಸಲಾಗಿದೆ. ಭಾಷಿಕವಾಗಿ ಆಭರಣಗಳ ಕುರಿತಾಗಿರುವ ಗಾದೆ, ಒಗಟು ಮತ್ತು ಒಡಪುಗಳಲ್ಲಿ ಉಕ್ತವಾಗಿರುವ ಅಂಶಗಳನ್ನು ವಿವೇಚನೆಗೊಳಪಡಿಸಲಾಗಿದೆ.

* ಧರಿಸುವ ಆಭರಣಗಳ ಆಧಾರದ ಮೇಲೆ ಸಾಮಾಜಿಕ ಅಂತಸ್ತನ್ನು ಗುರುತಿಸಬಹುದು. ಜೊತೆಗೆ ಅವರವರ ಆಚಾರ, ನಂಬಿಕೆ, ಸಂಪ್ರದಾಯಗಳಿಗನುಗುಣವಾಗಿ ಆಭರಣಗಳ ಬಳಕೆ, ಧರ್ಮ, ಜಾತಿ–ಪಂಗಡಗಳಲ್ಲಿ ಆಭರಣಗಳಿಗಿರುವ ಭಿನ್ನತೆಯನ್ನು ತಿಳಿಯಲಾಗಿದೆ. ಭಾಷಿಕವಾಗಿಯೂ ಆಭರಣಗಳ ಮೇಲೆ ಪ್ರಭಾವ ಬೀರಿರುವುದನ್ನು ಈ ನಿಬಂಧದಲ್ಲಿ ಕಟ್ಟಿಕೊಡಲಾಗಿದೆ.

❖❖❖

## ಪರಾಮರ್ಶನ ಗ್ರಂಥಗಳು

ಕಾರಂತ ಶಿವರಾಮ, ಸಿರಿಗನ್ನಡ ಅರ್ಥಕೋಶ, ಹರ್ಷ ಪ್ರಕಟನಾಲಯ, ಪುತ್ತೂರು, ೧೯೬೨.

ಕೇಶವನ್ ಪ್ರಸಾದ್.ಕೆ.ಮರಟ್ಟಿ, ಲಂಬಾಣಿ ಸಮುದಾಯದ ಥಾಲ್ಯ ಪಂಗಡದ ಅಧ್ಯಯನ, ಅಪ್ರಕಟಿತ ಎಂ.ಫಿಲ್ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ದಾನೇಶ ಎ.ಚೆಕ್ಕಿ, ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೧.

ದೇವೇಂದ್ರಕುಮಾರ ಹಕಾರಿ, ಸಂಧ್ಯಾರೆಡ್ಡಿ ಕೆ.ಆರ್, ಗ್ರಾಮಸಂಸ್ಕೃತಿ ಮಾಲೆ–೨, ಗ್ರಾಮೀಣ ಉಡುಗೆ–ತೊಡುಗೆಗಳು, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೦.

ದೇಜಗೌ, ಜಾನಪದ ಸೌಂದರ್ಯ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೭೭.

ನಂಜೇಗೌಡ, ಜಾನಪದ ಕೋಶ, ತನುಮನ ಪ್ರಕಾಶನ, ಮೈಸೂರು, ೨೦೦೨.

ಪಾಂಡುರಂಗಬಾಬು.ಡಿ, ಪಾಂಚಾಳ ವೃತ್ತಿಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

ಮುರಿಗೆಪ್ಪ.ಎ, ಬಿರಾದರ.ಬಿ.ಬಿ, ಮಟ್ಟಿ.ಎಸ್.ಎಸ್, ಜಾನಪದ ಸಾಹಿತ್ಯ ದರ್ಶನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮.

ಮೈಲಹಳ್ಳಿ ರೇವಣ್ಣ, ಜನಪದ ಗಾದೆ ಮತ್ತು ಒಗಟುಗಳು, ಪ್ರೇಮ ಪ್ರಕಾಶನ, ಮೈಸೂರು, ೨೦೧೨.

ರಾಮಾರಾಧ್ಯ.ಹು.ಮ(ಸಂ), ಕನ್ನಡ ಗಾದೆಗಳ ಮಹಾಕೋಶ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨.

ರಾಮೇಗೌಡ.(ರಾಗೌ), ನಮ್ಮ ಗಾದೆಗಳು ಮತ್ತು ಒಗಟುಗಳು, ಮೈಸೂರು, ೨೦೧೩.

ಲಕ್ಕಪ್ಪಗೌಡ.ಹೆಚ್.ಜೆ, ಒಗಟುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಲಕ್ಕಪ್ಪಗೌಡ.ಹೆಚ್.ಜೆ, ಒಗಟುಗಳು, ಚೇತನ ಬುಕ್ ಹೌಸ್, ಮೈಸೂರು, ೨೦೦೯.

ವಸಂತ ಕಲೆಬಾಗಲ್, ಫ್ಯಾಷನ್ ಜಗತ್ತು, ಸ್ವಾತಿ ಪ್ರಕಾಶನ, ಮೈಸೂರು, ೨೦೦೫.

ವಾಲಿ.ಎಂ.ಎನ್, ಸಿಗನ್ನಡ ಒಡಪುಗಳು, ಭುವನೇಶ್ವರಿ ಪ್ರಕಾಶನ, ವಿಜಾಪುರ, ೧೯೯೧.

ವೀರಣ್ಣ ದಂಡೆ, ಆಯ್ದ ಗಾದೆಗಳು ಹಾಗೂ ಒಗಟುಗಳು, ಕವಿರಾಜ ಮಾರ್ಗ ಪ್ರಕಾಶನ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೭.

ಶಂಕರನಾರಾಯಣ.ತೀ.ನಂ, ಸಂಕೀರ್ಣ ಜನಪದ ಕತೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೪.

ಸವಿತಾ ನಾಯಕ, ಉತ್ತರ ಕನ್ನಡ ಜಿಲ್ಲೆಯ ಕೆಲವು ಬುಡಕಟ್ಟುಗಳಲ್ಲಿ ಪ್ರಸಾಧನ ಕಲೆ, ಜಾನಪದ ಪ್ರಕಾಶನ, ಹೊನ್ನಾವರ, ೨೦೦೦.

ಸೌಭಾಗ್ಯವತಿ.ಕೆ, ಜನಪದ ಆಭರಣಗಳು, ಲಕ್ಷ್ಮೀ ಪ್ರಿಂಟರ್ಸ್, ಮೈಸೂರು.

❖❖❖

